**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ ಇವರು ಪ್ರಸ್ತಾವನೆ ಸಲ್ಲಿಸಿ, ಮೆ: ಸಂದೀಪ ಪ್ರಕಾಶನ್, ದೆಹಲಿ ಇವರಿಂದ ಇಲಾಖೆಯ ಗ್ರಂಥಾಲಯಕ್ಕೆ ಪುಸ್ತಕಗಳನ್ನು ಖರೀದಿಸಿದ ಬಾಬ್ತು ಡಿ.ಸಿ ಬಿಲ್ ಸಂಖ್ಯೆ 25:2006–07 ದಿನಾಂಕ 13.03.2007 ರಲ್ಲಿ ಜಿಲ್ಲಾ ಖಜಾನೆ, ಮೈಸೂರು ಇವರ ಧನಾದೇಶ ಸಂಖ್ಯೆ 181364, ದಿನಾಂಕ 22.03.2007 ರೂ.1,04,512.00 ಗಳನ್ನು ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 051 ಸಾಮಾನ್ಯ ವೆಚ್ಚಗಳ ಅಡಿಯಲ್ಲಿ ಭರಿಸಿ, ಪಾವತಿಸಲಾಗಿತ್ತು ಎಂದು ತಿಳಿಸಿ, ಸದರಿ ಧನಾದೇಶವನ್ನು ಹೆಚ್.ಡಿ.ಎಫ್.ಸಿ ಬ್ಯಾಂಕಿನಲ್ಲಿ ಹಾಕಿದಾಗ ಹೆಸರಿನಲ್ಲಿ ವ್ಯತ್ಯಾಸವಿದೆಯೆಂದು ಧನಾದೇಶವನ್ನು ಹಿಂದಕ್ಕೆ ನೀಡಿರುವ ಕಾರಣ ಮತ್ತು ಧನಾದೇಶವು 2 ವರ್ಷಕ್ಕೂ ಮೀರಿರುವುದರಿಂದ ನವೀಕರಿಸಲಾಗಲೀ, ಅಥವಾ ತಿದ್ದುಪಡಿ ಮಾಡಲಾಗಲೀ ಬರುವುದಿಲ್ಲವೆಂದು ಉಪನಿರ್ದೇಶಕರು, ಖಜಾನೆ ಇಲಾಖೆ ಇವರು ಧನಾದೇಶವನ್ನು ಹಿಂದಕ್ಕೆ ಕಳುಹಿಸಿರುವುದರಿಂದ ದಿನಾಂಕ 27.07.2009 ರಂದು ಪತ್ರ ಬರೆದು ಸದರಿ ರೂ.1,04,512.00 ಗಳನ್ನು 2009–10 ನೇ ಸಾಲಿನ ಕ್ರಿಯಾಯೋಜನೆಯಲ್ಲಿ ಸೇರಿಸಿ, ಪರಿಶೀಲನಾ ಪಟ್ಟಿಯೊಂದಿಗೆ ಮೆ: ಸಂದೀಪ ಪ್ರಕಾಶನ್, ದೆಹಲಿ ಇವರಿಗೆ ಹಣ ಪಾವತಿಸಲು ಮಂಜೂರಾತಿ ಕೋರಿ ಪ್ರಸ್ತಾಪಿಸಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 103 ಕೆಎಂಯು 2009, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2009**

ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆಯಲ್ಲಿ ಮೆ: ಸಂದೀಪ ಪ್ರಕಾಶನ್, ದೆಹಲಿ ಇವರಲ್ಲಿ ಪುಸ್ತಕ ಖರೀದಿಸಿದ ಬಾಬ್ತು ರೂ.1,04,512.00 (ರೂ. ಒಂದು ಲಕ್ಷ ನಾಲ್ಕು ಸಾವಿರ ಐದನೂರ ಹನ್ನೆರಡು ಮಾತ್ರ) ಗಳನ್ನು 2009–10 ನೇ ಸಾಲಿನ ಅನುದಾನದಲ್ಲಿ ಲೆಕ್ಕಶೀರ್ಷಿಕೆ 2205–00–103–0–01 (ಯೋಜನೆ) 051 ಸಾಮಾನ್ಯ ವೆಚ್ಚಗಳ ಅಡಿಯಲ್ಲಿ, ಪುನ: ಸದರಿ ಮೊತ್ತಕ್ಕೆ ಬಿಲ್ಲನ್ನು ತರಿಸಿ, ಮೆ: ಸಂದೀಪ ಪ್ರಕಾಶನ್, ದೆಹಲಿ ಇವರಿಗೆ ಪಾವತಿಸಲು ಪಾರದರ್ಶಕ ಅಧಿನಿಯಮ 1999 ಮತ್ತು ಅದರ ನಿಯಮಗಳು 2000 ಗಳನ್ನು ಅನುಸರಿಸುವ ಷರತ್ತಿಗೊಳಪಟ್ಟು ಸರ್ಕಾರದ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ಹಾಗೂ ವಾರ್ತಾ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 2116 ಐಎಫ್(ಬಿ&ಎ) 2009, ದಿನಾಂಕ 01.09.2009 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಭರ್ಮರಾಜಪ್ಪ**

ಪಿ.ಆರ್. 2286 ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ವಿಷಯ:** 2009–10ನೇ ಸಾಲಿಗೆ ಕೆಳದಿ ವಸ್ತುಸಂಗ್ರಹಾಲಯ ಮತ್ತು ಸಂಶೋಧನ ಕೇಂದ್ರ ಇವರಿಗೆ ನಿಗಧಿ ಪಡಿಸಿರುವ ಅನುದಾನ ರೂ.7.63 ಲಕ್ಷ ಹಣವನ್ನು ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಅವರ ಪತ್ರ ಸಂಖ್ಯೆ: ಡಿಎಎಂ/ಎಸಿಟಿ/1/57/2007–08 ದಿನಾಂಕ 17.08.2009

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದನ್ವಯ ಕುವೆಂಪು ವಿಶ್ವವಿದ್ಯಾನಿಲಯದವರು ಕೋರಿರುವಂತೆ ಕೆಳದಿ ವಸ್ತುಸಂಗ್ರಹಾಲಯ ಮತ್ತು ಸಂಶೋಧನ ಕೇಂದ್ರದ ಸಿಬ್ಬಂದಿಯ ವೇತನ ಮತ್ತು ಭತ್ಯೆಗಳಿಗಾಗಿ 2009–10ನೇ ಸಾಲಿನಲ್ಲಿ ಲೆಕ್ಕಶೀರ್ಷಿಕೆ 2205–00–103–0–01(ಯೋಜನೇತರ) 101 ಸಹಾಯಾನುದಾನ ಇದರಡಿಯಲ್ಲಿ ಕೆಳದಿ ವಸ್ತು ಸಂಗ್ರಹಾಲಯಕ್ಕೆ ನಿಗಧಿ ಪಡಿಸಲಾಗಿರುವ ಅನುದಾನ ರೂ.7.63 ಲಕ್ಷವನ್ನು ಕುಲಸಚಿವರು, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಇವರಿಗೆ ಪೇಯಿಸ್ ರಸೀತಿ ಮೂಲಕ ಬಿಡುಗಡೆ ಮಾಡಲು ಮಂಜೂರಾತಿ ಆದೇಶ ನೀಡುವಂತೆ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಆದೇಶ ಸಂಖ್ಯೆ: ಕಸಂವಾಪ್ರ 166 ಕೆಎಂಯು 2009, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2009**

ಕೆಳದಿ ವಸ್ತುಸಂಗ್ರಹಾಲಯ ಮತ್ತು ಸಂಶೋಧನ ಕೇಂದ್ರದ ಸಿಬ್ಬಂದಿಯ ವೇತನ ಮತ್ತು ಭತ್ಯೆಗಳಿಗಾಗಿ 2009–10ನೇ ಸಾಲಿನಲ್ಲಿ ನಿಗಧಿ ಪಡಿಸಲಾಗಿರುವ ಅನುದಾನ ರೂ.7.63 (ರೂ. ಏಳು ಲಕ್ಷ ಅರವತ್ತಮೂರು ಸಾವಿರ ಮಾತ್ರ) ಗಳನ್ನು ಕುಲಸಚಿವರು, ಕುವೆಂಪು ವಿಶ್ವವಿದ್ಯಾನಿಲಯ, ಶಂಕರಘಟ್ಟ, ಶಿವಮೊಗ್ಗ ಇವರಿಗೆ ಪೇಯಿಸ್ ರಸೀತಿ ಮೂಲಕ ಬಿಡುಗಡೆ

ಮಾಡಲು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ಇಲಾಖೆ, ಮೈಸೂರು ಇವರಿಗೆ ಈ ಮೂಲಕ ಸರ್ಕಾರದ ಮಂಜೂರಾತಿ ನೀಡಿದೆ. ಈ ವೆಚ್ಚವನ್ನು 2009–10ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205–00–103–0–01(ಯೋಜನೇತರ) 101 ಸಹಾಯಾನುದಾನ ಇದರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಕನ್ನಡ ಮತ್ತು ಸಂಸ್ಕೃತಿ, ಹಾಗೂ ವಾರ್ತಾ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 2149 ಐಎಫ್(ಬಿ&ಎ) 2009, ದಿನಾಂಕ 01.09.2009 ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ 10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2285 ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

**ವಿಷಯ:** ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರ ಆಪ್ತಶಾಖೆಗೆ ಸಿಬ್ಬಂದಿಗಳನ್ನು ನೇಮಕ ಮಾಡುವ ಬಗ್ಗೆ.

**ಓದಲಾಗಿದೆ:** 1 ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅವರ ಟಿಪ್ಪಣಿ ಸಂಖ್ಯೆ: ಕಗಪ್ರಅಪ್ರಾ/ಸಿನೇ/01/2009–10, ದಿನಾಂಕ 22.06.2009

2. ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರದ ಅವರ ಟಿಪ್ಪಣಿ ಸಂಖ್ಯೆ: ಕಗಪ್ರಅಪ್ರಾ/ಪತ್ರ/38/2009–10, ದಿನಾಂಕ 19.08.2009

**ಪ್ರಸ್ತಾವನೆ:**

ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ ಅವರು ಮೇಲೆ ಕ್ರಮ ಸಂಖ್ಯೆ (1) ಮತ್ತು (2)ರಲ್ಲಿ ಓದಲಾದ ಟಿಪ್ಪಣಿಗಳಲ್ಲಿ ಅವರ ಆಪ್ತಶಾಖೆಗೆ ಸಿಬ್ಬಂದಿಯನ್ನು ನೇಮಕಾತಿ ಮಾಡುವಂತೆ ಕೋರಿರುತ್ತಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಸಂವಾಪ್ರ 33 ಕೆಜಿಎಲ್ 2009, ಬೆಂಗಳೂರು, ದಿನಾಂಕ: 23ನೇ ಸೆಪ್ಟೆಂಬರ್ 2009**

ಅಧ್ಯಕ್ಷರು, ಕರ್ನಾಟಕ ಗಡಿ ಪ್ರದೇಶ ಅಭಿವೃದ್ಧಿ ಪ್ರಾಧಿಕಾರ, ಬೆಂಗಳೂರು ರವರ ಆಪ್ತಶಾಖೆಗೆ ಈ ಕೆಳಕಂಡ ಸಿಬ್ಬಂದಿಗಳನ್ನು ಅವರ ಹೆಸರಿನ ಮುಂದೆ ಸೂಚಿಸಿರುವ ಹುದ್ದೆಗಳಿಗೆ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ನೇಮಕಾತಿಗಳಿಗೆ ಸಂಬಂಧಪಟ್ಟಂತೆ ಷರತ್ತು ಮತ್ತು ನಿಬಂಧನೆಗಳನ್ನು ನಂತರ ಹೊರಡಿಸಲಾಗುವುದು.

| ಕ್ರಮ ಸಂಖ್ಯೆ | ಹೆಸರು ಮತ್ತು ವಿಳಾಸ | ನೇಮಕ ಮಾಡಿರುವ ಹುದ್ದೆ ಹಾಗೂ ಜಾರಿಗೆ ಬರುವ ದಿನಾಂಕ |
|---|---|---|
| 1. | ಶ್ರೀಮತಿ ಎಸ್.ಜಿ. ಹೇಮಾಂಬಿಕ W/o ಲೇಟ್ ನಾಗೇಶ್, ನಂ.8/3, ಮುನೇಶ್ವರ ಬ್ಲಾಕ್, "ಡಿ" ಕ್ರಾಸ್, ಮಠದಹಳ್ಳಿ, ಆರ್.ಟಿ.ನಗರ್ ಪೋಸ್ಟ್, ಬೆಂಗಳೂರು – 32 | ಆಪ್ತ ಸಹಾಯಕಿ; ದಿನಾಂಕ 15.06.2009 |
| 2. | ಶ್ರೀ ಹೆಚ್.ಟಿ. ವಿಜಯ S/o ಹೆಚ್.ಟಿ. ತಿಪ್ಪೇಶಪ್ಪ, ಹೊನ್ನೇಕೆರೆ, ಅರಳಹಳ್ಳಿ ಪೋಸ್ಟ್, ಬಾಗುರು ಮಾರ್ಗ, ಹೊಸದುರ್ಗ ತಾಲ್ಲೂಕು, ಚಿತ್ರದುರ್ಗ ಜಿಲ್ಲೆ | ಗ್ರೂಪ್ –ಡಿ; ದಿನಾಂಕ 19.08.2009 |

ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ: ಆಇ 883 ವೆಚ್ಚ–7/2009 ದಿನಾಂಕ 16–09–2009ರಲ್ಲಿ ಪಡೆದು ಈ ಆದೇಶವನ್ನು ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಎಂ.ಕೆ. ಧರ್ಮರಾಜಪ್ಪ**

ಪಿ.ಆರ್. 2281 ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ

### ತಿದ್ದೋಲೆ

**ಸಂಖ್ಯೆ:ಕಸಂವಾಪ್ರ 196 ಸ್ವೀಮರ 2009, ಬೆಂಗಳೂರು, ದಿನಾಂಕ: 20ನೇ ಅಕ್ಟೋಬರ್, 2009**

ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 196 ಸ್ವೀಮರ 2009, ದಿನಾಂಕ:30.7.2009ರಲ್ಲಿ ಮೌಲ್ಯಮಾಪನ ಕಾರ್ಯಗಳಿಗಾಗಿ ಇಲಾಖಾ ಮೌಲ್ಯಮಾಪನ ಸಮಿತಿಯಲ್ಲಿ ನೇಮಿಸಲಾದ ಸದಸ್ಯರುಗಳಲ್ಲಿ ಕ್ರಮ ಸಂಖ್ಯೆ(5)ರಲ್ಲಿರುವ ಮಾಹಿತಿ ತಂತ್ರಜ್ಞಾನ ಇಲಾಖೆಯ ಪ್ರತಿನಿಧಿಯನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸಮಿತಿಯ ಸದಸ್ಯತ್ವದಿಂದ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2420

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ

## ಒಳಾಡಳಿತ ಸಚಿವಾಲಯ

**ವಿಷಯ :** ಶ್ರೀ ಬುದ್ದಪ್ಪಾ, ಮಾಜಿ ಸಿ.ಪಿ.ಸಿ., ಸೇಡಂ ಪೊಲೀಸ್ ಠಾಣೆ, ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಡಿ.ಜಿ. ಮತ್ತು ಐ.ಜಿ.ಪಿ., ಬೆಂಗಳೂರು, ಇವರ ಆದೇಶ ಸಂಖ್ಯೆ: ಸಿಬಿ(8)18/2008–09 ದಿನಾಂಕ: 29–01–2009.
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 27–02–2009
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ (8) 18/2008–09 ದಿನಾಂಕ: 06–07–2009

**ಪ್ರಸ್ತಾವನೆ:**

ಶ್ರೀ ಬುದ್ದಪ್ಪಾ, ಇವರು ಶೋರಾಪುರ ಪೊಲೀಸ್ ಠಾಣೆಯಲ್ಲಿ ಪಿ.ಸಿ. ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಘೋರ ಲೋಪವೆಸಗಿರುವ ಕಾರಣದ ಮೇಲೆ ಇನ್ನೋರ್ವ ಅಧಿಕಾರಿಯೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6ರ ಜೊತೆ 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

" ಶ್ರೀ ಬುದ್ದಪ್ಪಾ ಸಿ.ಪಿ.ಸಿ.–532, ಶೋರಾಪುರ ಪೊಲೀಸ್ ಠಾಣೆ, ಆದ ನೀವು ದಿನಾಂಕ:21–05–2006ರ ರಾತ್ರಿ 10–00 ಗಂಟೆಯಿಂದ ಠಾಣೆ ಪಹರೆ ಕರ್ತವ್ಯದಲ್ಲಿದ್ದು, ಅಂದು ಬಂದಿಖಾನೆಯಲ್ಲಿದ್ದ ಆರೋಪಿ ಲಕ್ಕಪ್ಪ ತಂದೆ ಕನಕಪ್ಪ ಪೂಜಾರಿ ಈತನಿಗೆ ಕೈಕೊಳ ತೊಡಿಸದೇ ಬಂದಿಖಾನೆಗೆ ಕೀಲಿಯನ್ನು ಹಾಕದೇ ಹಾಗೆಯೇ ಇಟ್ಟಿದ್ದರಿಂದ ದಿನಾಂಕ: 22–05–2006 ರಂದು ಬೆಳಗಿನ ಜಾವ 3–30 ಗಂಟೆಯ ಸಮಯದಲ್ಲಿ ಆರೋಪಿ ಲಕ್ಕಪ್ಪ ಪೂಜಾರಿ ಈತನು ಲಾಕಪ್‌ನಿಂದ ಓಡಿಹೋಗಿದ್ದು, ಆತನು ಓಡಿ ಹೋಗಲು ಪರೋಕ್ಷವಾಗಿ ಸಹಾಯ ಮಾಡಿ ಕರ್ತವ್ಯದಲ್ಲಿ ಘೋರಲೋಪ ವೆಸಗಿರುವಿರಿ. "

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 29–01–09ರ ಆದೇಶದಲ್ಲಿ "ಅರ್ಜಿದಾರರನ್ನು ತಕ್ಷಕಣದಿಂದ ಜಾರಿಗೆ ಬರುವಂತೆ ಸೇವೆಯಿಂದ ವಜಾಗೊಳಿಸಲಾಗಿದೆ."

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಹೊಸ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 58 ಪೊಸಿಅ 2009 ಬೆಂಗಳೂರು ದಿನಾಂಕ: 31ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಬುದ್ದಪ್ಪಾ ಮಾಜಿ ಸಿ.ಪಿ.ಸಿ., ಸೇಡಂ ಪೊಲೀಸ್ ಠಾಣೆ, ಗುಲ್ಬರ್ಗಾ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2174

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಡಿ. ಪ್ರಭಾಕರ್, ಎಚ್.ಸಿ.–2111, ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: 43:ಡಿಇ:ಆರ:6(1):92 ದಿ: 20–10–95
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಂಚಾರ, ಬೆಂಗಳೂರು, ಇವರ ಆದೇಶ ಸಂಖ್ಯೆ: 59/ಅಪೀಲು/95–96 ದಿನಾಂಕ: 29–02–1996
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:29–05–08.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)32/2008–09 ದಿನಾಂಕ: 20–02–2009.
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 46 ಸಿಎನ್‌ಎಸ್ 2009 ದಿನಾಂಕ: 22–07–2009.

**ಪ್ರಸ್ತಾವನೆ:**

ಶ್ರೀ ಡಿ. ಪ್ರಭಾಕರ್, ಎಚ್.ಸಿ.–2111, ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಹಿಂದೆ ವೈಯ್ಯಾಲಿಕಾವಲ್ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಅನಧಿಕೃತವಾಗಿ ಗೈರುಹಾಜರಿ ಹಾಗೂ ದುರ್ನಡತೆಗಾಗಿ ಇವರ ವಿರುದ್ಧ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

1) "ಆರೋಪಿತ ಪೊಲೀಸ್ ಅಧಿಕಾರಿಯಾದ ಪಿ.ಸಿ.–4764, ಪ್ರಭಾಕರ್, ವೈಯಾಲಿಕಾವಲ್ ಪೊಲೀಸ್ ಠಾಣೆ ಆದ ನೀವು ದಿನಾಂಕ: 20–03–92 ರಂದು ಮಧ್ಯಾಹ್ನ 1–00 ಗಂಟೆಯಿಂದ ರಾತ್ರಿ 9–00 ಗಂಟೆಯವರೆಗೆ ಕರ್ತವ್ಯಕ್ಕೆಬರಬೇಕಾಗಿದ್ದು, ಕರ್ತವ್ಯಕ್ಕೆ ಬರದೇ ಗೈರುಹಾಜರಾಗಿರುವುದು.

2) ಆರೋಪಿತ ಪೊಲೀಸ್ ಅಧಿಕಾರಿಯಾದ ಪಿ.ಸಿ.–4764, ಪ್ರಭಾಕರ್, ವೈಯಾಲಿಕಾವಲ್ ಪೊಲೀಸ್ ಠಾಣೆ ಆದ ನೀವು ದಿ:20–03–92 ರಂದು ಸುಮಾರು 3–30 ಗಂಟೆ (ಮದ್ಯಾಹ್ನ) ಸಮಯದಲ್ಲಿ ಮದ್ಯಪಾನ ಮಾಡಿದ್ದು, ಪಾನಮತ್ತರಾಗಿದ್ದು, ವೈಯಾಲಿಕಾವಲ್ ಪೊಲೀಸ್ ಠಾಣೆಯ ಮುಂಭಾಗದ ರಸ್ತೆಯಲ್ಲಿ ನಿಂತು. ಸಾರ್ವಜನಿಕರನ್ನು ಅವಾಚ್ಯ ಶಬ್ದಗಳಿಂದ "ನಾನು ಯಾರು ಗೊತ್ತಾ ಪೊಲೀಸ್, ಸೂಳೆ ಮಕ್ಕಳ ನಿಮ್ಮಮ್ಮನಾಕೇಯಾ ಬೋಳಿಮಕ್ಕಳಾ" ಎಂದುಬೈಯುತ್ತಾ ಸಾರ್ವಜನಿಕರ ನೆಮ್ಮದಿಗೆ ಭಂಗವುಂಟುಮಾಡಿದ್ದು ಮತ್ತು ವಾಹನಗಳ ಸಂಚಾರಕ್ಕೆ ತೊಂದರೆ ಉಂಟುಮಾಡಿದ್ದು, ಶಿಸ್ತಿನ ಇಲಾಖೆಯಲ್ಲಿರುವ ನೀವು ಒಬ್ಬ ಜವಾಬ್ದಾರಿಯುತ ಪೊಲೀಸ್ ಅಧಿಕಾರಿಗೆ ಸಲ್ಲದ ರೀತಿ ವರ್ತಿಸಿ ದುರ್ನಡತೆ ಪ್ರದರ್ಶಿಸಿರುವ ಆರೋಪ.

3) ಆರೋಪಿತ ಪೊಲೀಸ್ ಅಧಿಕಾರಿಯಾದ ಪಿ.ಸಿ.–4764, ಪ್ರಭಾಕರ್, ಆದ ನಿಮ್ಮನ್ನು ದಿ:20–03–92 ರಂದು ಸುಮಾರು 3–45 ಗಂಟೆಯಲ್ಲಿ ಪಾನಮತ್ತರಾಗಿದ್ದ ನಿಮ್ಮನ್ನು ಪಿ.ಎಸ್.ಐ. ಶ್ರೀ ಈ.ಆರ್.ನಾರಾಯಣ ಸ್ವಾಮಿ, ವೈಯಾಲಿಕಾವಲ್ ಪೊಲೀಸ್ ಠಾಣೆ, ರವರು ಎಚ್.ಸಿ.–1247, 1899 ಮತ್ತು ಪಿಸಿ–7439, ರವರ ಬೆಂಗಾವಲಿನಲ್ಲಿ ಮೆಮೋ ನಂ:88:92 ದಿನಾಂಕ: 20–03–92ರಲ್ಲಿ ಆಟೋರಿಕ್ಷಾ ನಂ:ಎಂವೈಡಿ:7579ರಲ್ಲಿ ಕೆ.ಸಿ.ಜಿ. ಆಸ್ಪತ್ರೆಗೆ ಮೆಮೋ ಮಾಡಿಸಿಕೊಂಡು ಬರಲು ಕಳುಹಿಸಿದ್ದು, ನೀವು ಕೆ.ಸಿ.ಜಿ. ಆಸ್ಪತ್ರೆಯ ಬಳಿ ಆಟೋರಿಕ್ಷಾದಿಂದ ಇಳಿದು ಕೈಯಿಂದ ಕೊಸರಾಡಿ ಬಿಡಿಸಿಕೊಂಡು ಕೆಳಗೆ ಬಿದ್ದಿದ್ದ

ಒಂದು ಕಲ್ಲನ್ನು ತೆಗೆದು ಕೊಂಡು ಎತ್ತಿಹಾಕಲು ಪ್ರಯತ್ನಿಸಿದ್ದು ಹಾಗೂ ಬೆದರಿಕೆ ಹಾಕಿ ಆಸ್ಪತ್ರೆಯ ಬಳಿ ಅಸಭ್ಯ ರೀತಿ ವರ್ತಿಸಿ ತಪ್ಪಿಸಿಕೊಂಡು ಓಡಿಹೋಗಿದ್ದು, ದುರ್ನಡತೆ ಪ್ರದರ್ಶಿಸಿರುವ ಆರೋಪ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 20–10–95ರ ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದಾರೆ. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಆಯುಕ್ತರು, ಬೆಂಗಳೂರು ನಗರ, ಇವರು ಮಾನವೀಯ ದೃಷ್ಟಿಯಿಂದ ಇವರನ್ನು ಕರ್ತವ್ಯಕ್ಕೆ ಪುನರ್ ನೇಮಿಸಿ, ಇವರ ವೇತನವನ್ನು ಪೊಲೀಸ್ ಪೇದೆಯ ಹುದ್ದೆಯ ಕನಿಷ್ಠ ವೇತನಕ್ಕೆ ಇಳಿಸಿ ಅಲ್ಲಿಂದ ಹೊಸದಾಗಿ ವಾರ್ಷಿಕ ವೇತ ಬಡ್ತಿಯನ್ನು ಪಡೆಯುವುದು ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ: 29–02–96ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ಮನವಿ ಪ್ರಾಧಿಕಾರವು ಭಾಗಶ: ಮಾರ್ಪಡಿಸಿದ ದಂಡನಾದೇಶವು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಯ ನಿಯಮ 59(1)(ಬಿ)ಗೆ ವ್ಯತಿರಿಕ್ತವಾಗಿರುವುದನ್ನು ಮನಗಂಡು ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಲು ತೀರ್ಮಾನಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 67 ಪೊಸಿಅ 2009 ಬೆಂಗಳೂರು, ದಿನಾಂಕ: 26ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ. ಪ್ರಭಾಕರ್, ಎಚ್.ಸಿ.–2111, ಶಿವಾಜಿನಗರ ಪೊಲೀಸ್ ಠಾಣೆ, ಬೆಂಗಳೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

I. ಪೊಲೀಸ್ ಕಾನ್ಸ್‌ಟೇಬಲ್ ಹುದ್ದೆಯ ಕಾಲಿಕ ವೇತನ ಶ್ರೇಣಿ ರೂ.1040–1900/– ಆಗಿದ್ದು (1994ರ ಪರಿಷ್ಕೃತ ವೇತನ ಶ್ರೇಣಿಯಂತೆ) ಇವರ ವೇತನವನ್ನು ಸದರಿ ಹುದ್ದೆಯ ಕನಿಷ್ಠ ವೇತನ ರೂ.1040–ಕ್ಕೆ (ದಿ:01–03–1996 ರಿಂದ ಜಾರಿಗೆ ಬರುವಂತೆ) ಐದು ವರ್ಷಗಳ ಕಾಲ ಸಂಚಿತ ಪರಿಣಾಮ ರಹಿತ (Without Cummulative Effect)ವಾಗಿ ಇಳಿಸಿದೆ. ದಂಡನೆಯ ಅವಧಿಯಲ್ಲಿ ಇವರು ಯಾವುದೇ ವಾರ್ಷಿಕ ವೇತನ ಬಡ್ತಿಯಾಗಲೀ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ, ಇವರ ವೇತನವು ಸ್ಥಿರವಾಗಿರುತ್ತದೆ.

II. ಮೇಲ್ಮನವಿ ಪ್ರಾಧಿಕಾರವು ಇವರ ದಂಡನೆಯನ್ನು ಮಾರ್ಪಡಿಸಿ, ಆದೇಶ ಹೊರಡಿಸಿದ ತಿಂಗಳಿನ ಮುಂದಿನ ತಿಂಗಳು ಅಂದರೆ ದಿ:01–03–1996 ರಿಂದ ಜಾರಿಗೆ ಬರುತ್ತದೆ [ದಂಡನಾದೇಶದ ದಿನಾಂಕ:29–02–1996 ಆಗಿರುವುದರಿಂದ]

III. ಇವರ ದಂಡನೆಯು ದಿ:01–03–1996 ರಿಂದ 31–03–2001ರ ವರೆಗೆ ಐದು ವರ್ಷಗಳು ಇರುತ್ತದೆ.

IV. ದಂಡನಾವಧಿಯಾದ ಐದು ವರ್ಷಗಳು ಪೂರ್ಣಗೊಂಡ ನಂತರ ಇವರ ವೇತನವನ್ನು ಇವರು ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನ ಹಾಗೂ ತಡೆಹಿಡಿಯಲಾಗಿದ್ದ ಐದು ವಾರ್ಷಿಕ ವೇತನ ಬಡ್ತಿಗಳನ್ನು ಸೇರಿಸಿ ಕಾಲ್ಪನಿಕವಾಗಿ ಮರುನಿಗದಿಗೊಳಿಸುವುದು.

V. ಸೇವೆಯಿಂದ ವಜಾಗೊಂಡು ಮತ್ತೆ ಸೇವೆಗೆ ಪುನರ್ ನೇಮಕವಾಗುವವರೆಗಿನ ಕರ್ತವ್ಯ ನಿರ್ವಹಿಸದ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ (Dies-Non) ಎಂದು ಪರಿಗಣಿಸಿದೆ.

VI. ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2175

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎಂ.ಎಂ. ನದಾಫ್, ಪಿ.ಎಸ್.ಐ., ಅಬಕಾರಿದಳ, ಜಿಲ್ಲಾ ಪೊಲೀಸ್ ಕಛೇರಿ, ಹಾವೇರಿ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಡೆಪ್ಯೂಟಿ ಪೊಲೀಸ್ ಕಮೀಷನರ್, ಕೇಂದ್ರ ವಿಭಾಗ, ಬೆಂಗಳೂರು, ಇವರ ಆದೇಶ ಸಂಖ್ಯೆ: 43:ಡಿಇ:ಆರ:6(1):92 ದಿ: 20–10–95
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ, ಇವರ ಆದೇಶ ಸಂಖ್ಯೆ: ಅಪೀಲು 15/ಉವ/2008 ದಿನಾಂಕ: 31–05–2008
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 21–08–2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)66/2008–09 ದಿನಾಂಕ: 04–12–2008
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 68 ಸಿಎನ್‌ಎಸ್ 2009 ದಿನಾಂಕ: 22–07–2009

**ಪ್ರಸ್ತಾವನೆ:**

ಶ್ರೀ ಎಂ.ಎಂ. ನದಾಫ್, ಇವರು ಹಾವೇರಿ ಜಿಲ್ಲೆಯ ಗುತ್ತಲ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ದುರ್ನಡತೆ, ಬೇಜವಾಬ್ದಾರಿತನ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು,

**ದೋಷಾರೋಪಣೆ:**

"ಶಿಸ್ತುಪಾಲನಾ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ನೀವು ಗುತ್ತಲ ಪೊಲೀಸ್ ಠಾಣೆಯ ಸರಹದ್ದಿನ ಗುತ್ತಲ ಲಮಾಣಿ ತಾಂಡಾದಲ್ಲಿ ದಿ:17–10–2007 ರಂದು ಗಣೇಶಪ್ಪ ಶಿವಪ್ಪ ಲಮಾಣಿ ಮತ್ತು ರಾಜಾ ಲಕ್ಕಪ್ಪ ಲಮಾಣಿ ಹಾಗೂ ಇತರರು ನಲ್ಲಿಯ ನೀರಿನ ಸಲುವಾಗಿ ಹೊಡೆದಾಡಿದ ಮಾಹಿತಿ ನಿಮ್ಮ ಠಾಣೆಗೆ ಸಾಯಂಕಾಲ 07–00 ಗಂಟೆಗೆ ತಲುಪಿದ ನಂತರ ನೀವು ಗಾಯಾಳುಗಳನ್ನು ಗುತ್ತಲದ ಸರ್ಕಾರಿ ಆಸ್ಪತ್ರೆಗೆ ಕಳುಹಿಸಿ, ಅವರಿಂದ ಯಾವುದೇ ದೂರು ಸ್ವೀಕರಿಸದೇ ಮಸ್ತಿಯಲ್ಲಿ ಸರ್ಕಾರಿ ವಾಹನ ಮತ್ತು ರಿವಾಲ್ವರ ತೆಗೆದುಕೊಂಡು ತಂಟೆಗೆ ಸಂಬಂಧಪಡದ ತಾಂಡಾದ ಕರಿಯಪ್ಪ ಹನುಮಂತಪ್ಪ ಲಮಾಣಿ 30 ವರ್ಷ, ಈತನಿಗೆ ಲಾಠಿಯಿಂದ ಹೊಡೆದು ಗಾಯಪಡಿಸಿ, ಅದನ್ನು ಕೇಳಲು ಬಂದ ಸಾರ್ವಜನಿಕರಿಗೆ ಅವಾಚ್ಯವಾಗಿ ಬೈದು ರಿವಾಲ್ವರಿನಿಂದ ಗುಂಡು ಹಾರಿಸುತ್ತೇನೆಂದು ಬೆದರಿಸಿದ್ದಕ್ಕಾಗಿ ಸಾರ್ವಜನಿಕರು ಮತ್ತು ನಿಮ್ಮ ಮದ್ಯೆ ಗಲಾಟೆಯಾಗಿ ನಿಮ್ಮ ಸಿಬ್ಬಂದಿಯೊಂದಿಗೆ ಠಾಣೆಗೆ ಬಂದು ನಡೆದ ವಿಷಯವನ್ನು ಮೇಲಾಧಿಕಾರಿಗಳಿಗೆ ತಿಳಿಸದೇ ಬಿ.ಜೆ.ಪಿ. ಮತ್ತು ಕಾಂಗ್ರೆಸ್ ಪಕ್ಷದ ಜನರ ನಡುವೆ ಗಲಟೆ ನಡೆದಿದೆ ಎಂದು ಡಿ.ಎ.ಆರ್. ತುಕಡಿಗಳನ್ನು ಕಳುಹಿಸಲು ನಿಸ್ತಂತು ಮುಖಾಂತರ ತಪ್ಪು ಮಾಹಿತಿ ಕಳುಹಿಸಿ, ಪರಿಸ್ಥಿತಿಯನ್ನು ನಿಯಂತ್ರಿಸದೇ ಮತ್ತಷ್ಟು ಗಲಾಟೆ ನಡೆಯಲು ನೀವು ನೇರವಾಗಿ ಕಾರಣೀಭೂತರಾಗಿ ಸದರಿ ಘಟನೆಯು ದಿನಪತ್ರಿಕೆಗಳಲ್ಲಿ ಬರುವಂತೆ ಮಾಡಿ ನಿಮ್ಮ ಕರ್ತವ್ಯವನ್ನು ಸಮರ್ಪಕವಾಗಿ ನಿರ್ವಹಿಸದೇ ಆಧ್ಯ ಕರ್ತವ್ಯದಲ್ಲಿ ತೀವ್ರ ಕರ್ತವ್ಯ ನಿರ್ಲಕ್ಷತನ ಹಾಗೂ ಬೇಜವಾಬ್ದಾರಿತನವನ್ನು ಪ್ರದರ್ಶಿಸಿರುತ್ತೀರಿ. ಅಲ್ಲದೇ ಸಾರ್ವಜನಿಕರಲ್ಲಿ ಇಲಾಖೆಯ ಘನತೆ ಧಕ್ಕೆಯನ್ನುಂಟು ಮಾಡಿ ದುರ್ನಡತೆ ಪ್ರದರ್ಶಿಸಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ: 07–12–2007ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ 3 ತಿಂಗಳ ಕಾಲ ತಡೆಹಿಡಿಯುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾಂ, ಇವರು ಮೇಲೆ ಕ್ರಮ ಸಂಖ್ಯೆ: (2) ರಲ್ಲಿ ಓದಲಾದ ದಿನಾಂಕ: 31–05–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರದ ದಂಡನೆಯನ್ನು ಭಾಗಶ: ಮಾರ್ಪಡಿಸುವ ಸಲುವಾಗಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿತ್ತು. ಆಯೋಗವು ಶಿಸ್ತು ಪ್ರಾಧಿಕಾರದ ದಂಡನೆಗೆ ಓದಲಾದ (5)ರ ಪತ್ರದಲ್ಲಿ ಸಹಮತಿ ನೀಡಿರುವ ಹಿನ್ನೆಲೆಯಲ್ಲಿ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 290 ಪೊಸಿಅ 2008 ಬೆಂಗಳೂರು, ದಿನಾಂಕ: 01ನೇ ಸೆಪ್ಟೆಂಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ನದಾಫ್, ಪಿ.ಎಸ್.ಐ., ಅಬಕಾರಿ ದಳ, ಜಿಲ್ಲಾ ಪೊಲೀಸ್ ಕಛೇರಿ, ಹಾವೇರಿ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2176

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ., ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಮೈಸೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರ ಆದೇಶ ಸಂಖ್ಯೆ: ಶಿಕ್ಷೆ/101 /2006–07 ಓ.ಬಿ/ಸಿವಿಲ್/181/06–07 ದಿ: 23–11–2006
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರ ಆದೇಶ ಸಂಖ್ಯೆ: ಅಪೀಲು/29/2006–07 ದಿನಾಂಕ: 10–04–2007
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿ:13–08–07
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)74/2007–08 ದಿನಾಂಕ: 12–11–2007 & 08–09–2008
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 44 ಸಿಎನ್‌ಎಸ್ 2009 ದಿನಾಂಕ: 21–07–2009.

**ಪ್ರಸ್ತಾವನೆ:**

ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ., ನಂಜನಗೂಡು ಗ್ರಾಮಾಂತರ ಪೊಲೀಸ್ ಠಾಣೆ, ಇವರು (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ನಿರ್ಲಕ್ಷತೆ, ಬೇಜವಾಬ್ದಾರಿತನ ಹಾಗೂ ಕರ್ತವ್ಯಲೋಪವೆಸಗಿರುವ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 7 ರಡಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷಾರೋಪಣೆ:**

"ದಿ:05-07-06ರಂದು ಹಗಿನವಾಳು ಗ್ರಾಮದಲ್ಲಿ ಪಿರ್ಯಾದಿ ಚಿಕ್ಕಯ್ಯನವರ ಪತ್ನಿ ಮಹದೇವಮ್ಮ ಎಂಬುವವರನ್ನು ಪಿರ್ಯಾದಿಯ ತಮ್ಮಂದಿರಾದ ಮಹದೇಶ ಮತ್ತು ಲಿಂಗಪ್ಪ, ಇರವರುಗಳು ಆಸ್ತಿಯ ವಿಚಾರವಾಗಿ ಮನಸ್ತಾಪದಿಂದ ಚಾಕುವಿನಿಂದ ಕೊಲೆ ಮಾಡಿರುತ್ತಾರೆಂದು ಚಿಕ್ಕಯ್ಯ, ಹಗಿನವಾಳು ಗ್ರಾಮರವರು ನೀಡಿದ ದೂರಿನ ಮೇರೆಗೆ ನಂಜನಗೂಡು ಗ್ರಾಮಾಂತರ ಠಾಣೆ ಮೊ.ಸಂ.177/06 ಕಲಂ 448, 341, 114, 302, ರೆ/ವಿ 34 ಐ.ಪಿ.ಸಿ. ಪ್ರಕರಣ ದಾಖಲಾಗಿರುತ್ತದೆ. ಹಿಂದಿನಿಂದಲೂ ಆರೋಪಿಗಳಿಗೂ ಮತ್ತು ಮೃತಳಿಗೂ ಆಸ್ತಿಯ ವಿಚಾರದಲ್ಲಿ ವಿವಾದವಿದ್ದು, ಈ ಘಟನೆ ನಡೆಯುವ ಮೊದಲು ಮೃತಳು ಒಟ್ಟು ನಾಲ್ಕು ಬಾರಿ ದೂರುಗಳನ್ನು ನಂಜನಗೂಡು ಗ್ರಾಮಾಂತರ ಠಾಣೆಗೆ ನೀಡಿರುತ್ತಾರೆ.

ನೀವು ಒಬ್ಬ ಜವಾಬ್ದಾರಿಯುತ ಠಾಣಾಧಿಕಾರಿಯಾಗಿದ್ದು, ಈ ಪ್ರಕರಣದ ಹಿನ್ನೆಲೆಯಲ್ಲಿ ಮೃತಳು ಆರೋಪಿಗಳಿಂದ ಆಸ್ತಿಯ ವಿವಾದದಲ್ಲಿ ಉಂಟಾದ ಗಲಭೆ ಬಗ್ಗೆ ಈ ಪ್ರಕರಣ ವರದಿಯಾಗುವ ಮೊದಲೇ ದೂರುಗಳನ್ನು ಮೃತಳು ನೀಡಿದ್ದರು ಸಹ ಮುಂಜಾಗ್ರತಾ ಕ್ರಮವಾಗಿ ಭಾರತೀಯ ದಂಡ ಪ್ರಕ್ರಿಯೆ ಸಂಹಿತೆ ಕಲಂ 107, 145, ರೀತ್ಯಾ ಕೇಸು ಗಳನ್ನು ದಾಖಲು ಮಾಡದೇ ಇರುವುದರ ಮೂಲಕ ಕರ್ತವ್ಯದಲ್ಲಿ ಬೇಜವಾಬ್ದಾರಿ ಹಾಗೂ ನಿರ್ಲಕ್ಷತೆ ಪ್ರದರ್ಶಿಸಿ ಕರ್ತವ್ಯಲೋಪ ವೆಸಗಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ಮೈಸೂರು ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 23–11–2006ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಒಂದು ವರ್ಷದ ಅವಧಿಗೆ ತಡೆಹಿಡಿಯುವ ದಂಡನೆಯನ್ನು ವಿಧಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ದಕ್ಷಿಣ ವಲಯ, ಮೈಸೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 10–04–2007ರ ಆದೇಶದಲ್ಲಿ ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದಾಖಲೆಗಳೊಂದಿಗೆ ಪರಿಶೀಲಿಸಲಾಗಿದೆ. ಅರ್ಜಿದಾರರ ವಿರುದ್ಧದ ಆರೋಪದಲ್ಲಿ ಇವರ ಪಾತ್ರವನ್ನು ಗಮನಿಸಿದಲ್ಲಿ ದಂಡನೆಯು ಅಧಿಕವೆಂದು ಪರಿಗಣಿಸಿ ಶಿಸ್ತು ಪ್ರಾಧಿಕಾರದ ದಂಡನಾದೇಶವನ್ನು ಭಾಗಶ: ಮಾರ್ಪಡಿಸಲು ತೀರ್ಮಾನಿಸಿ, ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 349 ಪೊಸಿಅ 2007 ಬೆಂಗಳೂರು, ದಿನಾಂಕ: 24 ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಕೆ. ಪ್ರಭಾಕರ್, ಪಿ.ಎಸ್.ಐ. ನಂಜನಗೂಡು ಗ್ರಾಮಾಂತರ ಠಾಣೆ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳಿಗೆ ದಕ್ಕೆಯಾಗದಂತೆ ಒಂದು ತಿಂಗಳ ಕಾಲ ಮುಂದೂಡುವ ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2060

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ.ಎಸ್.ರಾಮಚಂದ್ರ, ಮಾಜಿ ಸಿ.ಪಿ.ಸಿ., ಹರಿಹರ ನಗರ ದಾವಣಗೆರೆ, ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಆದೇಶ ಸಂಖ್ಯೆ:ಸಿಬಿ(8)2/2005–06 ದಿನಾಂಕ:17–04–2006
2. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:30–05–2006
3. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಸಿಬಿ(8) 2005–06 ದಿ:14–2–2007.
4. ಕರ್ನಾಟಕ ಲೋಕ ಸೇವಾ ಆಯೋಗದ ಪತ್ರ ಸಂಖ್ಯೆ:ಪಿಎಸ್‌ಸಿ 83 ಸಿಎನ್‌ಎಸ್ 07 ದಿನಾಂಕ:12–03–2009 ಮತ್ತು 21.7.2009.

**ಪ್ರಸ್ತಾವನೆ:**

ಶ್ರೀ.ಎಸ್.ರಾಮಚಂದ್ರ, ಮಾಜಿ ಸಿ.ಪಿ.ಸಿ., ಹರಿಹರ ನಗರ ದಾವಣಗೆರೆ, ಜಿಲ್ಲೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರು ಬರಹಗಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕರ್ತವ್ಯದಲ್ಲಿ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಇತರೆ ಇಬ್ಬರು ಸಿಬ್ಬಂದಿಗಳೊಂದಿಗೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡಂತೆ ದೋಷಾರೋಪಣೆಯನ್ನು ಹೊರಿಸಲಾಗಿದೆ.

**ದೋಷರೋಪಣೆ:–**

1. ನೀವು ದಿ:17–01–2002 ರಿಂದ 03–06–2003ರ ವರೆಗೆ ಹರಿಹರ ನಗರ ಠಾಣಾ ಬರಹಗಾರರಾಗಿ ಕರ್ತವ್ಯ ನಿರ್ವಹಿಸುತ್ತಿದ್ದು, ಆ ವೇಳೆಯಲ್ಲಿ ಠಾಣೆಯ ಹಣಕಾಸಿನ ವ್ಯವಹಾರವನ್ನು ನಿರ್ವಹಿಸಿದ್ದು, ದಿ:07–08–2002 ರಿಂದ 30–09–2002ರ ವರೆಗೆ ಠಾಣೆಯಲ್ಲಿ ದಾಖಲು ಮಾಡಿದ ಒಟ್ಟು 75 ಎಂ.ವಿ. ಪ್ರಕರಣಗಳಲ್ಲಿ ವಸೂಲಿ ಮಾಡಿದ ದಂಡದ ಒಟ್ಟು ಮೊತ್ತ ರೂ.7,500/– (ರೂಪಾಯಿ ಏಳು ಸಾವಿರದ ಐದುನೂರು ಮಾತ್ರ) ಗಳನ್ನು ಸರ್ಕಾರಕ್ಕೆ ಜಮಾ ಮಾಡದೆ ದುರುಪಯೋಗಪಡಿಸಿಕೊಂಡು ಕರ್ತವ್ಯದಲ್ಲಿ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

2. ದಿ:18–10–2002 ರಿಂದ 03–06–2003ರ ವರೆಗೆ ಎಂ.ವಿ. ಪ್ರಕರಣಗಳಲ್ಲಿ ದಂಡ ವಸೂಲಿ ಮಾಡಿದ್ದು ಒಟ್ಟು ಹಣ ರೂ.32,100/– (ರೂಪಾಯಿ ಮೂವತ್ತೆರೆಡು ಸಾವಿರದ ಒಂದು ನೂರು ಮಾತ್ರ)ಗಳ ಬಗ್ಗೆ ಒಟ್ಟು 22 ನಕಲಿ ಚಲನಗಳನ್ನು ಸೃಷ್ಟಿಸಿ ಮೊತ್ತವನ್ನು ಸರ್ಕಾರಕ್ಕೆ ಜಮಾಮಾಡಿದ ರೀತಿಯಲ್ಲಿ ಸುಳ್ಳು ದಾಖಲೆ ಸೃಷ್ಟಿ ಮಾಡಿ ಸದರಿ ಮೊತ್ತ ರೂ.32,100/–ಗಳನ್ನು ದುರುಪಯೋಗ ಪಡಿಸಿಕೊಂಡು ಕರ್ತವ್ಯದಲ್ಲಿ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

3. ನೀವು ದಿ:17-01-2002 ರಿಂದ 03-06-2003ರ ವರೆಗೆ ಐ.ಎಂ.ವಿ ಪ್ರಕರಣಗಳಲ್ಲಿ ದಂಡ ವಸೂಲಿ ಮಡಿದ ರಸೀದಿಗಳಲ್ಲಿ ಹೆಚ್ಚಿನ ಮೊತ್ತಕ್ಕೆ ದಂಡ ಹಾಕಿದ್ದ ರಸೀದಿ ಸಂಖ್ಯೆ:83311, 242002, 242027, 59517, 192417 ಹಾಗೂ 545023 ಗಳಲ್ಲಿ ಕಡಿಮೆ ಮೊತ್ತವನ್ನು ನಮೂದಿಸಿ ಸರ್ಕಾರಕ್ಕೆ ಜಮಾ ಮಾಡಿ ಒಟ್ಟು ರೂ.800/- (ಎಂಟು ನೂರು ಮಾತ್ರ)ಗಳನ್ನು ದುರುಪಯೋಗ ಪಡಿಸಿಕೊಂಡು ಕರ್ತವ್ಯದಲ್ಲಿ ತೀವ್ರತರದ ದುರ್ನಡತೆಯನ್ನು ಪ್ರದರ್ಶಿಸಿರುತ್ತೀರಿ.

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:17-04-2006ರ ಆದೇಶದಲ್ಲಿ ``ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸುವ ಶಿಕ್ಷೆ ವಿಧಿಸಿರುತ್ತಾರೆ.``

ಈ ಆದೇಶದ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ದಂಡನೆಯ ಪ್ರಮಾಣವು ಅಧಿಕವೆಂದು ಪರಿಗಣಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಒಇ 101 ಪೊಸಿಅ 2007 ಬೆಂಗಳೂರು, ದಿನಾಂಕ:22ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25 ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ.ಎಸ್.ರಾಮಚಂದ್ರ, ಮಾಜಿ ಸಿ.ಪಿ.ಸಿ., ಹರಿಹರ ನಗರ ದಾವಣಗೆರೆ, ಜಿಲ್ಲೆ, ಇವರಿಗೆ ಶಿಸ್ತುಪ್ರಾಧಿಕಾರದ ದಂಡನೆಯ ಆದೇಶವನ್ನು ಭಾಗಶ: ಮಾರ್ಪಡಿಸಿ, ಈ ಕೆಳಕಂಡಂತೆ ಆದೇಶಿಸಿದೆ.

i) ಅರ್ಜಿದಾರರನ್ನು ಸೇವೆಗೆ ಪುನರ್ ನೇಮಕ ಮಾಡಲಾಗಿದೆ.

ii) ಇವರ ಮುಂದಿನ ಒಂದು ವಾರ್ಷಿಕ ವೇತನ ಬಡ್ತಿಯನ್ನು ಸಂಚಿತ ಪರಿಣಾಮಬೀರುವಂತೆ ತಡೆಹಿಡಿಯಲಾಗಿದೆ.

iii ಸೇವೆಯಿಂದ ವಜಾಗೊಂಡು ಪುನರ್ ನೇಮಕಾತಿ ಹೊಂದಿ ಕರ್ತವ್ಯಕ್ಕೆ ಹಾಜರಾಗುವವರೆಗಿನ ಅವಧಿಯನ್ನು ಲೆಕ್ಕಕ್ಕಿಲ್ಲದ ಅವಧಿ (Dies-Non) ಎಂದು ಪರಿಗಣಿಸಲಾಗಿದೆ.

iv) ಅಮಾನತ್ತಿನಲ್ಲಿದ್ದ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2061

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀಮತಿ ಎಸ್.ಪಿ. ಅಟಗಲ್, ಮ.ಪಿ.ಸಿ.-784, ಸವದತ್ತಿ ಪೊಲೀಸ್ ಠಾಣೆ, ಹಾಗೂ ಶ್ರೀ ಆರ್.ಬಿ. ಪಾಟೀಲ್, ಪಿ.ಸಿ.-2462, ಗೋಕಾಕ ಗ್ರಾಮೀಣ ಪೊಲೀಸ್ ಠಾಣೆ, ರವರುಗಳು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರ ಆದೇಶ ಸಂಖ್ಯೆ: ಸಿಬ್ಬಂದಿ 2/ಇವಿ/04/2007 ಅ.ಪು.ಸಂ: 962/07 ದಿ: 07-10-07
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರ ಆದೇಶ ಸಂಖ್ಯೆ: ಅಪೀಲು 4/ಉವ/2008 ದಿನಾಂಕ: 19-04-2008
3. ಅರ್ಜಿದಾರರುಗಳ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 12-08-2008
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)52/2008-09 ದಿನಾಂಕ: 20-10-2008
5. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂಖ್ಯೆ: ಪಿಎಸ್‌ಸಿ 217 ಸಿಎನ್ಎಸ್ 2008 ದಿನಾಂಕ:24-07-2009

**ಪ್ರಸ್ತಾವನೆ:**

ಶ್ರೀಮತಿ ಎಸ್.ಪಿ. ಅಟಗಲ್, ಮ.ಪಿ.ಸಿ.-784, ಸವದತ್ತಿ ಪೊಲೀಸ್ ಠಾಣೆ, ಹಾಗೂ ಶ್ರೀ ಆರ್.ಬಿ. ಪಾಟೀಲ್, ಪಿ.ಸಿ.-2462, ಗೋಕಾಕ ಗ್ರಾಮೀಣ ಪೊಲೀಸ್ ಠಾಣೆ, (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಇವರುಗಳ ವಿರುದ್ಧ

ಘೋರ ದುರ್ನಡತೆ ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6ರ ಜೊತೆಗೆ 8 ರಡಿ ಜಂಟಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು,

**ದೋಷಾರೋಪಣೆ:**

"ಆಪಾದಿತ ಪೊಲೀಸ್ ಅಧಿಕಾರಿಗಳಾದ ನೀವುಗಳು ಒಬ್ಬರಿಗೊಬ್ಬರು ಅನೈತಿಕ ಸಂಬಂಧ ಇಟ್ಟುಕೊಂಡಿದ್ದು ಅಲ್ಲದೆ, ಆರ್.ಬಿ. ಪಾಟೀಲ, ಸಿ.ಪಿ.ಸಿ. ಬ.ನಂ:2452, ಗೋಕಾಕ ಗ್ರಾಮೀಣ ಪೊಲೀಸ್ ಠಾಣೆ, ನೀವು ಮೇಲಿಂದ ಮೇಲೆ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರುಹಾಜರ ಉಳಿದು ಗೋಕಾಕದಿಂದ ಸವದತ್ತಿಗೆ ಬಂದು ಸವದತ್ತಿ ಪೊಲೀಸ್ ವಸತಿಗೃಹದಲ್ಲಿ ವಾಸವಾಗಿರುವ ಎಸ್.ಪಿ. ಅಟಗಲ್ ಮ.ಪಿ.ಸಿ.–784 ರವರೊಂದಿಗೆ ದಿ:18–09–06 ರಂದು ರಾತ್ರಿ ಅನೈತಿಕ ಸಂಬಂಧ ಹೊಂದಿ ಅರೆನಗ್ನಾವಸ್ಥೆಯಲ್ಲಿ ಸಿಕ್ಕಿಬಿದ್ದು, ವಸತಿ ಗೃಹ ಲೇನದಲ್ಲಿ ಗೌರವಸ್ಥ ಕುಟುಂಬಗಳಿಗೆ ದುಷ್ಪರಿಣಾಮ ಬೀರುವಂತೆ ವರ್ತಿಸಿ ನಿಮ್ಮ ಕರ್ತವ್ಯದಲ್ಲಿ ಘೋರ ದುರ್ನಡತೆ ಪ್ರದರ್ಶಿಸಿರುವಿರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 17–10–2007ರ ಆದೇಶದಲ್ಲಿ ಅರ್ಜಿದಾರರಿಗೆ ಪೊಲೀಸ್ ಪೇದೆ ಹುದ್ದೆಯ ಕನಿಷ್ಠ ಮೂಲ ವೇತನಕ್ಕೆ ಇಳಿಸಿ, ಅರ್ಜಿದಾರರುಗಳು ಹೊಸದಾಗಿ ವೇತನ ಬಡ್ತಿಗಳನ್ನು ಗಳಿಸುವ ದಂಡನೆ ವಿಧಿಸಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಆರಕ್ಷಕ ಮಹಾ ನಿರೀಕ್ಷಕರು, ಉತ್ತರ ವಲಯ, ಬೆಳಗಾವಿ, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 19–04–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರುಗಳು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರದ ದಂಡನಾದೇಶವು ಕರ್ನಾಟಕ ನಾಗರಿಕ ಸೇವಾ ನಿಯಮಗಳು, ನಿಯಮ 59(1)(ಬಿ)ಗೆ ವ್ಯತಿರಿಕ್ತವಾಗಿರುವುದರಿಂದ ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಲು ತೀರ್ಮಾನಿಸಿ, ಈ ಕುರಿತು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಓದಲಾದ (5)ರ ಪತ್ರದಲ್ಲಿ ಪಡೆದು ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 238 ಪೊಸಿಅ 2008 ಬೆಂಗಳೂರು, ದಿನಾಂಕ: 26ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ,

ಶ್ರೀಮತಿ ಎಸ್.ಪಿ. ಅಟಗಲ್, ಮ.ಪಿ.ಸಿ.–784, ಸವದತ್ತಿ ಪೊಲೀಸ್ ಠಾಣೆ, ಹಾಗೂ ಶ್ರೀ ಆರ್.ಬಿ. ಪಾಟೀಲ್, ಪಿ.ಸಿ.–2462, ಗೋಕಾಕ ಗ್ರಾಮೀಣ ಪೊಲೀಸ್ ಠಾಣೆ, ಇವರುಗಳು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿಯನ್ನು ಭಾಗಶ: ಪುರಸ್ಕರಿಸಿ ಈ ಕೆಳಕಂಡಂತೆ ಆದೇಶಿಸಿದೆ.

i) ಇವರುಗಳ ವೇತವನ್ನು ಪಿ.ಸಿ. ಹುದ್ದೆಯ ಕನಿಷ್ಠ ವೇತನ ರೂ.5,800/–ಕ್ಕೆ ಐದು ವರ್ಷಗಳ ಕಾಲ ಸಂಚಿತ ಪರಿಣಾಮ ರಹಿತವಾಗಿ ಇಳಿಸಲಾಗಿದೆ. ಈ ಆದೇಶವು ಶಿಸ್ತುಪ್ರಾಧಿಕಾರವು ಹೊರಡಿಸಿದ ದಂಡನಾದೇಶದ ದಿನಾಂಕದಿಂದ ಜಾರಿಗೆ ಬರುತ್ತದೆ.

ii) ಈ ಅವಧಿಯಲ್ಲಿ ವಾರ್ಷಿಕ ವೇತನ ಬಡ್ತಿಯಾಗಲಿ ಅಥವಾ ಪದೋನ್ನತಿಯಾಗಲಿ ಪಡೆಯಲು ಅರ್ಹರಿರುವುದಿಲ್ಲ ಇವರ ವೇತನವು ಸ್ಥಿರವಾಗಿರುತ್ತದೆ.

iii ದಂಡನಾವಧಿಯಾದ 5 ವರ್ಷಗಳು ಪೂರ್ಣಗೊಂಡ ನಂತರ ಇವರುಗಳ ವೇತನವನ್ನು ದಂಡನಾವಧಿಯ ಪೂರ್ವದಲ್ಲಿ ಪಡೆಯುತ್ತಿದ್ದ ಮೂಲ ವೇತನ ಹಾಗೂ ತಡೆಹಿಡಿಯಲಾಗಿದ್ದ 5 ವಾರ್ಷಿಕ ವೇತನ ಬಡ್ತಿಗಳನ್ನು ಸೇರಿಸಿ ಕಾಲ್ಪನಿಕವಾಗಿ ಮರುನಿಗದಿಗೊಳಿಸುವುದು.

iv) ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2062

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಜಗದೀಶ ಸಿ.ಪಿ.ಸಿ. 411, ನೇತಾಜಿ ನಗರ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರ ಆದೇಶ ಸಂಖ್ಯೆ: ಸಿಬ್ಬಂದಿ(3)/ಇವಿ/19/2007 ಓ.ಬಿ. ಸಂ: 225/08 ದಿನಾಂಕ: 06–03–2008
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರ ಆದೇಶ ಸಂಖ್ಯೆ: ಅಪೀಲು58/ಈವ/2008/6768ಅ.ಪು.ಸಂ:65/ಈವ/2008 ದಿನಾಂಕ:07–12–08
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 03–03–2009
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)128/ 2008–09 ದಿನಾಂಕ: 03–07–2009

**ಪ್ರಸ್ತಾವನೆ:**

ಶ್ರೀ ಜಗದೀಶ ಸಿ.ಪಿ.ಸಿ. 411, ನೇತಾಜಿ ನಗರ ಪೊಲೀಸ್ ಠಾಣೆ, ರಾಯಚೂರು ಜಿಲ್ಲೆ, ಇವರು ತುರ್ವಿಹಾಳ ಪೊಲೀಸ್ ಠಾಣೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ಪ್ರದರ್ಶಿಸಿದ ಕಾರಣದ ಮೇಲೆ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು, 1965ರ ನಿಯಮ 6 ರಡಿಯಲ್ಲಿ ಇಲಾಖಾ ವಿಚಾರಣೆಗೆ ಆದೇಶಿಸಿ ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:**

**"**ಶ್ರೀ ಜಗದೀಶ್ ರವರೇ ನೀವು ಶ್ರೀ ಪ್ರಕಾಶ ತಂದೆ ನಾಗೇಶ್ವರರಾವ ಸಾ: ಗುಂಜಳ್ಳಿ ಕ್ಯಾಂಪ ಎಂಬ ಮಟಕಾ ಬುಕ್ಕಿಯನ್ನು ಪಿ.ಎಸ್.ಐ., ತುರ್ವಿಹಾಳ ಠಾಣೆ ರವರು ಕರೆದುಕೊಂಡು ಬರಲು ಹೇಳಿದ್ದಾರೆ ನಡೆ ಠಾಣೆಗೆ ಹೋಗೋಣ ಅಂತಾ ಹೇಳಿ ಆತನನ್ನು ಠಾಣೆಗೆ ಕರೆದುಕೊಂಡು ಹೋಗದೇ, ಆತನ ಪರವಾಗಿ ಆತನ ಮಿತ್ರನಾದ ಬಸಪ್ಪನಿಂದ ರೂ.300/– ಅಕ್ರಮ ಸಂಭಾವನೆ ಪಡೆದಿದ್ದು ಅಲ್ಲದೇ ವಾರದಲ್ಲಿ ಒಂದೆರಡಲು ಸಲ ಗುಂಜಳ್ಳಿ ಕ್ಯಾಂಪ್‌ಗೆ ಹೋಗಲಿ ಅಲ್ಲಿ ಕಾನೂನು ಬಾಹಿರ ಚಟುವಟಿಕೆಗಳಾದ ಮಟಕಾ/ಇಸ್ಪೆಟ್ ಜೂಜಾಟದಲ್ಲಿ ತೊಡಗಿದ್ದವರಿಂದ ಅಕ್ರಮ ಸಂಭಾವನೆ ಪಡೆದು ಕಾನೂನು ಬಾಹಿರ ಚಟುವಟಿಕೆಗಳು ನಡೆಯುವಂತೆ ಪರೋಕ್ಷವಾಗಿ ಸಹಕರಿಸಿ ಕರ್ತವ್ಯದಲ್ಲಿ ಅತೀವ ದುರ್ನಡತೆಯನ್ನು ಪ್ರದರ್ಶಿಸಿರುವಿರಿ.**"**

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಜಿಲ್ಲಾ ಪೊಲೀಸ್ ಅಧೀಕ್ಷಕರು, ರಾಯಚೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ: 06–03–2008ರ ಆದೇಶದಲ್ಲಿ ಅರ್ಜಿದಾರರ ಮುಂದಿನ ಮೂರು ವಾರ್ಷಿಕ ವೇತನ ಬಡ್ತಿಗಳನ್ನು ತದನಂತರದ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮುಂದೂಡಲಾಗಿದೆ. ದಿನಾಂಕ:22–06–2007ರಿಂದ ಕರ್ತವ್ಯಕ್ಕೆ ವರದಿ ಮಾಡಿಕೊಳ್ಳುವವರೆಗಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಲಾಗಿದೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ, ಗುಲ್ಬರ್ಗಾ, ಇವರು ಶಿಸ್ತು ಪ್ರಾಧಿಕಾರದ ಆದೇಶವನ್ನು ಭಾಗಶ: ಮಾರ್ಪಡಿಸಿ, ಇವರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರದಂತೆ ಎರಡು ವರ್ಷಗಳ ಕಾಲ ಮುಂದೂಡಿ, ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿ ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 07–12–08ರಲ್ಲಿ ಆದೇಶಿಸಿದ್ದಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನು, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ, ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 59 ಪೊಶಿಅ 2009 ಬೆಂಗಳೂರು, ದಿನಾಂಕ: 21ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಜಗದೀಶ ಸಿ.ಪಿ.ಸಿ. 411, ನೇತಾಜಿ ನಗರ ಪೊಲೀಸ್ ಠಾಣೆ, ರಾಯಚೂರು, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2181

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

**ವಿಷಯ :** ಶ್ರೀ ಎಸ್. ಉಮೇಶ್, ಮಾಜಿ ಪಿ.ಸಿ., ಯಶವಂತಪುರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಕುರಿತು ಅಂತಿಮ ಆದೇಶ.

**ಓದಲಾಗಿದೆ :**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಉತ್ತರ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ: 11/ಡಿಇ/ಆರ್–6/ಡಿಸಿಪಿ.ಉ/2005 ದಿನಾಂಕ: 29–10–2007
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರ ಆದೇಶ ಸಂಖ್ಯೆ:104/ಅಪೀಲು/2007 ದಿನಾಂಕ: 13–06–2008
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ: 07–02–2009
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು(2)116/2008–09 ದಿನಾಂಕ: 08–05–2009

**ಪ್ರಸ್ತಾವನೆ:**

ಶ್ರೀ ಎಸ್. ಉಮೇಶ್, ಇವರು ಯಶವಂತಪುರ ಪೊಲೀಸ್ ಠಾಣೆ, ಬೆಂಗಳೂರು, ಇಲ್ಲಿ ಪೊಲೀಸ್ ಕಾನ್ಸ್‌ಟೇಬಲ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದಾಗ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ದುರ್ನಡತೆ ಪ್ರದರ್ಶಿಸಿದರು ಎಂಬ ಕಾರಣಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿಗಳು) ನಿಯಮಾವಳಿ 1965ರ ನಿಯಮ 6 ರಡಿ ಇಲಾಖಾ ವಿಚಾರಣೆಗೆ ಆದೇಶಿಸಿ, ಈ ಕೆಳಕಂಡ ದೋಷಾರೋಪಣೆಯನ್ನು ಹೊರಿಸಲಾಗಿತ್ತು.

**ದೋಷಾರೋಪಣೆ:–**

"ನೀವು ಅಂದರೆ ಶ್ರೀ ಉಮೇಶ್, ಪಿ.ಸಿ.–6082, ಯಶವಂತಪುರ ಪೊಲೀಸ್ ಠಾಣೆ, ಆದ ನೀವು ಯಶವಂತಪುರ ಪೊಲೀಸ್ ಠಾಣೆಯಲ್ಲಿ ಪೊಲೀಸ್ ಪೇದೆ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದು, ದಿನಾಂಕ: 01–09–2005 ರಿಂದ ಕರ್ತವ್ಯಕ್ಕೆ ಅನಧಿಕೃತವಾಗಿ ಗೈರು ಹಾಜರಾಗಿದ್ದು, ನಿಮ್ಮ ಪತ್ನಿ ಶ್ರೀಮತಿ ಸವಿತ ಎಸ್., ರವರನ್ನು ಹೆಚ್ಚಿನ ವರದಕ್ಷಿಣೆಗಾಗಿ ಮಾನಸಿಕ ಹಾಗೂ ದೈಹಿಕವಾಗಿ ಹಿಂಸೆ ನೀಡಿರುವುದಾಗಿ ಶ್ರೀಮತಿ ಸವಿತಾ ಎಸ್., ರವರು ಬೆಂಗಳೂರಿನ ಅಲಸೂರು ಗೇಟ್ ಮಹಿಳಾ ಪೊಲೀಸ್ ಠಾಣೆಯಲ್ಲಿ ದೂರು ನೀಡಿದ್ದು, ಈ ಬಗ್ಗೆ ದೂರು ದಾಖಲಿಸಿಕೊಂಡು ಕೃತ್ಯ ನಡೆದ ಸ್ಥಳದ ಆಧಾರದ ಮೇರೆಗೆ ಶಿವಮೊಗ್ಗ ಜಿಲ್ಲೆಯ ಭದ್ರಾವತಿ, ಹೊಸನಗರ ಪೊಲೀಸ್ ಠಾಣೆಗೆ ವರ್ಗಾವಣೆ ಮಾಡಿದ್ದು, ಸದರಿ ದೂರು ನಿಮ್ಮ ವಿರುದ್ಧ ಭದ್ರಾವತಿ ಹೊಸನಗರ ಪೊಲೀಸ್ ಠಾಣೆ ಮೊ.ಸಂ:121/05 ಕಲಂ 498ಎ–506 ಸಹಿತ 34 ಐಪಿಸಿ ಮತ್ತು 3,4, ಡಿಪಿ ಆಕ್ಟ್ ಪ್ರಕಾರ ಪ್ರಕರಣ ದಾಖಲಾಗಿದ್ದು, ನಿಮ್ಮನ್ನು ಸದರಿ ಪೊಲೀಸರು ದಿ:10–10–2005 ರಂದು ದಸ್ತಗಿರಿ ಮಾಡಿ ಮಾನ್ಯ ನ್ಯಾಯಾಲಯಕ್ಕೆ ಹಾಜರುಪಡಿಸಿದ್ದು, ಮಾನ್ಯ ನ್ಯಾಯಾಲಯವು 1(ಒಂದು) ದಿನದ ನ್ಯಾಯಾಂಗ ಬಂಧನಕ್ಕೆ ಒಳಪಡಿಸಿರುತ್ತದೆ.

ನೀವು ಶಿಸ್ತು ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಹೆಚ್ಚಿನ ವರದಕ್ಷಿಣೆಗಾಗಿ ನಿಮ್ಮ ಪತ್ನಿಯನ್ನು ಮಾನಸಿಕ ಹಾಗೂ ದೈಹಿಕವಾಗಿ ಹಿಂಸೆ ಆರೋಪದ ಮೇಲೆ ನಿಮ್ಮ ವಿರುದ್ಧ ಪ್ರಕರಣ ದಾಖಲಾಗಿದ್ದು, ಸದರಿ ಕೇಸಿನಲ್ಲಿ ದಸ್ತಗಿರಿಯಾಗಿ ನ್ಯಾಯಾಂಗ ಬಂಧನಕ್ಕೆ ಒಳಪಟ್ಟಿರುವಿರಿ, ಇದರಿಂದ ನೀವು ಇಲಾಖೆಗೆ ಸಲ್ಲದ ರೀತಿಯಲ್ಲಿ ದುರ್ನಡತೆಯನ್ನು ಪ್ರದರ್ಶಿಸಿದ್ದು, ಇಲಾಖೆಗೆ ಅಗೌರವ ತಂದಿರುತ್ತೀರಿ."

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತುಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಆಯುಕ್ತರು, ಉತ್ತರ ವಿಭಾಗ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ:(1)ರಲ್ಲಿ ಓದಲಾದ ದಿನಾಂಕ:29–10–2007ರ 'ಆದೇಶದಲ್ಲಿ ಅರ್ಜಿದಾರರನ್ನು ಸೇವೆಯಿಂದ ವಜಾಗೊಳಿಸಿ ಆದೇಶಿಸಿದ್ದಾರೆ.ದಿನಾಂಕ:22–10–2005 ರಿಂದ 19–07–2007ರ ವರೆಗಿನ ಅಮಾನತ್ತಿನ ಅವಧಿಯನ್ನು ಅಮಾನತ್ತೆಂದೆ ಪರಿಗಣಿಸಿದ್ದಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ, ಬೆಂಗಳೂರು, ಇವರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ದಿನಾಂಕ: 13–06–2008ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಪರಿಷ್ಕರಣ ಮೇಲ್ಮನವಿಯಲ್ಲಿ ಪರಿಗಣಿಸುವಂತಹ ಯಾವುದೇ ಸಮರ್ಥನೀಯ ಹೊಸ ಅಂಶಗಳು ಇರುವುದಿಲ್ಲ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಅತೀವ ದುರ್ನಡತೆ ಪ್ರದರ್ಶಿಸಿರುವುದು ಸಾಬೀತಾಗಿರುತ್ತದೆ. ಆದ್ದರಿಂದ ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನೆ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 36 ಪೊಸಿಅ 2009 ಬೆಂಗಳೂರು ದಿನಾಂಕ: 06ನೇ ಆಗಸ್ಟ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ಪೊಲೀಸ್ ಅಧಿನಿಯಮ 1963ರ ಸೆಕ್ಷನ್ 25ರಡಿಯಲ್ಲಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಎಸ್. ಉಮೇಶ್, ಮಾಜಿ ಪಿ.ಸಿ., ಯಶವಂತಪುರ ಪೊಲೀಸ್ ಠಾಣೆ, ಬೆಂಗಳೂರು ನಗರ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 1962

**ಟಿ.ಎನ್. ರವಿಪ್ರಕಾಶ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು)

## ಇಂಧನ ಸಚಿವಾಲಯ

### ಸೇರ್ಪಡೆ

**ಸಂಖ್ಯೆ: ಇಎನ್ 292 ಎನ್‌ಸಿಇ 2007, ಬೆಂಗಳೂರು, ದಿನಾಂಕ: 7ನೇ ಅಕ್ಟೋಬರ್, 2009**

ಸರ್ಕಾರಿ ಆದೇಶ ಸಂಖ್ಯೆ: ಇಎನ್ 292 ಎನ್‌ಸಿಇ 2007 ದಿನಾಂಕ:25.6.2009ರ ಆದೇಶ ಭಾಗದ ಮೊದಲನೆ ಕಂಡಿಕೆಯಲ್ಲಿ ಈ ಕೆಳಗಿನಂತೆ ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

" Longitude $74^0$45' to $74^0$46' & Latituted:$14^0$23' to $14^0$25'

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2374

**ಎಸ್.ಜಿ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಇಂಧನ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

### ಸೇರ್ಪಡೆ

**ಸಂಖ್ಯೆ:ಸಿಐ:76:ಎಂಜಿಎಸ್:2008(1), ಬೆಂಗಳೂರು, ದಿನಾಂಕ: 12ನೇ ಅಕ್ಟೋಬರ್, 2009**

ದಿನಾಂಕ:18.8.2009ರ ಆದೇಶ ಸಂಖ್ಯೆ:ಸಿಐ 76 ಎಂಜಿಎಸ್ 2008 ರ ಆದೇಶ ಭಾಗದ 6 ಮತ್ತು 7ನೇ ಸಾಲಿನಲ್ಲಿನ "ಅಂತರ್ಜಲ ವಿಭಾಗಗಳನ್ನು ಬಲಡಿಸಲು" ಆದನಂತರ "(ಖನಿಜಾಡಳಿತದ ಕಾರ್ಯಚಟುವಟಿಕೆಗಳೂ ಸೇರಿದಂತೆ)" ಎಂದು ಸೇರಿಸಿಕೊಂಡು ಓದಿಕೊಳ್ಳತಕ್ಕದ್ದು.

ಇನ್ನುಳಿದಂತೆ, ಸದರಿ ಆದೇಶದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2379

**ಎ.ಪಿ. ರಾಮಕೃಷ್ಣ**

ಪೀಠಾಧಿಕಾರಿ (ಗಣಿ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಆಕುಕ 261 ಹೆಚ್‌ಎಸ್‌ಹೆಚ್ 2009, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್, 2009**

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಗುತ್ತಿಗೆ ಆಧಾರದ ಮೇಲೆ ನೇಮಕಗೊಂಡು, ಸರ್ಕಾರಿ ಸೇವೆಯಲ್ಲಿ ಸಕ್ರಮಗೊಳಿಸಿರುವ ಸರ್ಕಾರದ ಅಧಿಸೂಚನೆ ಸಂಖ್ಯೆ:ಆಕುಕ 350 ಹೆಚ್‌ಎಸ್‌ಹೆಚ್ 2003 ದಿನಾಂಕ:17.3.2006 ರ ಕ್ರಮಸಂಖ್ಯೆ 306 ರಲ್ಲಿ "ಡಾ:ಮಹೇಶ್ ಜಿ. ಮೋರೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಮುಸ್ತೂರು" ಎಂಬುದಕ್ಕೆ ಬದಲಾಗಿ "ಡಾ:ಮಹೇಶ ಬಿ. ಮೋರೆ, ಪ್ರಾಥಮಿಕ ಆರೋಗ್ಯ ಕೇಂದ್ರ, ಮುಷ್ಟೂರು" ಎಂದು ಜನ್ಮ ದಿನಾಂಕವನ್ನು "1.10.1979" ಎಂಬದರ ಬದಲಾಗಿ "1.10.1971" ಎಂದು ಓದಿಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2456

**ಐ. ಹೇಮನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ಸೇವೆಗಳು–1)

**ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಸಚಿವಾಲಯ**

**ವಿಷಯ :** ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಗುಲ್ಬರ್ಗಾ ಜಿಲ್ಲೆ ಮತ್ತು ಗುಲ್ಬರ್ಗಾ ಜಿಲ್ಲೆಯ ಅಫಜಲ್ ಪುರ ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ:ಯೋಇ 309 ಪಿಟಿಪಿ 94, ದಿನಾಂಕ:7.8.1995,
2. ಮಾನ್ಯ ರಾಜ್ಯಾಧ್ಯಕ್ಷರು, ಭಾ.ಜ.ಪಾ ಇವರ ಟಿಪ್ಪಣಿ ಪತ್ರ ಸಂ:ಬಾಜಪ/ಕರಾ/2065/09 ದಿನಾಂಕ:23.6.2009.
3. ಮಾನ್ಯ ರಾಜ್ಯಾಧ್ಯಕ್ಷರು, ಭಾ.ಜ.ಪಾ ಇವರ ಟಿಪ್ಪಣಿ ಪತ್ರ ಸಂ:ಬಾಜಪ /ಕರಾ/2049/09 ದಿನಾಂಕ:26.6.2009.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ:7.8.1995ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾಣಗೊಳಿಸಲು ಜಿಲ್ಲಾ ಮಟ್ಟದ /ತಾಲ್ಲೂಕು ಮಟ್ಟದ ತ್ರಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾಣಗೊಳಿಸಲು ಜಿಲ್ಲಾ ಮಟ್ಟದ / ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗಳನ್ನು ರಚಿಸಲಾಗಿರುತ್ತದೆ. ಮಾನ್ಯ ಯೋಜನಾ ಸಚಿವರ ಶಿಫಾರಸ್ಸು ಮೇರೆಗೆ ಮಾನ್ಯ ಮುಖ್ಯಮಂತ್ರಿಯವರು ಅನುಮೋದಿಸಿರುವಂತೆ ಗುಲ್ಬರ್ಗಾ ಜಿಲ್ಲೆ ಮತ್ತು ಗುಲ್ಬರ್ಗಾ ಜಿಲ್ಲೆಯ ಅಫಜಲ್‌ಪುರ ತಾಲ್ಲೂಕಿನ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನು ನಾಮನಿರ್ದೇಶಕ ಮಾಡಲು ಸರ್ಕಾರ ತೀರ್ಮಾನಿಸಿದೆ. ಆದ್ದರಿಂದ ಸರ್ಕಾರ ಈ ಆದೇಶವನ್ನು ಹೊರಡಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ:ಯೋಇ 70 ಯೋವಿವಿ 2009, ಬೆಂಗಳೂರು, ದಿನಾಂಕ:5ನೇ ಅಕ್ಟೋಬರ್, 2009**

ಕರ್ನಾಟಕ ಅಭಿವೃದ್ಧಿ ಕಾರ್ಯಕ್ರಮಗಳನ್ನು (20 ಅಂಶಗಳ ಕಾರ್ಯಕ್ರಮವು ಸೇರಿದಂತೆ) ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಈ ಕೆಳಕಂಡ ಸದಸ್ಯರುಗಳನ್ನು ಜಿಲ್ಲಾ ಮಟ್ಟದ /ತಾಲ್ಲೂಕು ಮಟ್ಟದ ತ್ರೈಮಾಸಿಕ ಪರಿಶೀಲನಾ ಸಮಿತಿಗೆ ಅಧಿಕಾರೇತರ ಸದಸ್ಯರುಗಳನ್ನಾಗಿ ನಾಮ ನಿರ್ದೇಶನ ಮಾಡಲಾಗಿದೆ.

| ಕ್ರ.ಸಂ. | ಜಿಲ್ಲೆ | ಅಭ್ಯರ್ಥಿಗಳ ಹೆಸರು<br>ಶ್ರೀಯುತರು/ಶ್ರೀಮತಿ | ವರ್ಗ |
|---|---|---|---|
| 1 | ಗುಲ್ಬರ್ಗಾ ಜಿಲ್ಲೆ | 1. ಶ್ರೀ ಗಂಗಾಧರ ಬಿಲಗುಂದಿ<br>2. ಪ್ರಕಾಶ ಖಿಡಕೆ | ಸಾಮಾನ್ಯ ಹಿಂ. ವರ್ಗ |
| 2 | ಗುಲ್ಬರ್ಗಾ ಜಿಲ್ಲೆ<br>(ಅಫಜಲ್ ಪುರ ತಾಲ್ಲೂಕು | 1. ಶ್ರೀ ವಿಜಯ ಕುಮಾರ್ ದೇಸಾಯಿ ಅರ್ಜುಣಗಿ | ಸಾಮಾನ್ಯ |
| | | 2. ಶ್ರೀ ಶಿವಶರಣಪಂಚಕಟ್ಟಿ ದೇಸಾಯಿ ಕಲ್ಲೂರ | ಸಾಮಾನ್ಯ |
| | | 3. ಶ್ರೀ ಮಾಳಪ್ಪ ಪೂಜಾರಿ ಹೂವಿನಹಳ್ಳಿ | ಹಿಂ.ವರ್ಗ |
| | | 4. ಶ್ರೀ ದತ್ತು ಲಕ್ಕಪ್ಪ ಸಂಧೆ ದೇವಲ ಗಾಣಗಾಪುರ | ಎಸ್.ಸಿ |
| | | 5. ಶ್ರೀಮತಿ ಕಮಲಾಬಾಯಿ ಶೇಕಪ್ಪ ಹಂಚನಾಳ ಉಡಚಾಣ | ಮಹಿಳೆ |
| | | 6. ಶ್ರೀ ಪ್ರಕಾಶ್ ಹಬ್ಬು ಅಫ್‌ಜಲಪುರ | ಅ.ಸಂ |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2458

**ಬಿ. ಚಿಕ್ಕರಾಜು**

ಸರ್ಕಾರದ ಅಧೀನ ಕಾರ್ಯದರ್ಶಿ,

ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ

## ENERGY SECRETARIATE

**Sub :** Allotment of 10.00 MW capacity of grid connected Solar Photovoltaic Power Plant to M/s Milltec Machinery Pvt. Limited–reg.

**Read :** 1 Ministry of New & Renewable Energy, Government Of India, New Delhi letter No: 32/61/2007-08/PVSE dated: 24.1.2008.

2 Letter No: KRED/07/SPV PP/2009-2010/147 dated: 22.1.2009 received from the Managing Director, Karnataka Renewable Energy Development Limited, Bangalore.

3 Proceedings of the Allotment Committee Meeting held on 13.2.2009

**PREAMBLE:**

In the letter read at (1) above Ministry of New & Renewable Energy (MNRE) has issued guidelines for Demonstration Programme on Grid Interactive Solar Photovoltaic Power Generation. MNRE will provide subsidy of Rs. 12/- per Kwh of power generated through Solar Photovoltaic Power Plant and which is supplied to grid with minimum of 1.00 MW generation and maximum of 5.00 MW at a place. The developer has to approach Ministry of New & Renewable Energy through KREDL after acquisition of land for the project and entering into PPA with ESCOMs.

In the letter read at (2) above, the Managing Director, Karnataka Renewable Energy Development Limited, Bangalore has recommended for allotment of 10.00 MW capacity of Grid Connected Solar Photovoltaic Power Plant to M/s Milltec Machinery Pvt. Limited at Daroji/Joladarasi, Bellary District.

The proposal was placed before the allotment committee meeting held on 13.2.2009 and the Committee recommended for allotment (Proceedings read at (3) above). Hence the order :-

**GOVERNMENT ORDER NO. EN 29 NCE 2009 BANGALORE, DATED: 22nd September, 2009.**

Government accords approval for allotment of 10.00 MW capacity of Grid Connected Solar Photovoltaic Power Plant to M/s Milltec Machinery Pvt. Limited at Daroji/Joladarasi, Bellary District subject to the following conditions :-

1 (a) The allottee shall execute an agreement with Government within 45 days from the date of the capacity allotment order failing which the allotment order shall become automatically lapsed. There shall be no refund of the application fee of Rs. 5,000/- per M.W received by Karnataka Renewable Energy Development Limited, Bangalore.

(b) Such an agreement on Rs. 400.00 Stamp Paper shall be routed through the Managing Director, Karnataka Renewable Energy Development Limited, Bangalore who shall certify as to its correctness after due scrutiny.

(c) Before executing the agreement the project developer shall deposit in advance with Karnataka Renewable Energy Development Limited, Bangalore the detailed project report (DPR) processing fee as per Government Order.

2(a) The project Developer shall obtain all statutory clearance from the respective authorities such as Karnataka Power Transmission Corporation Limited, Karnataka State Pollution Control Board, Forest, Ecology & Environment Department etc. Thereafter, he shall prepare and submit 3 copies of Detailed Project Report to the Managing Director, Karnataka Renewable Energy Development Limited, Bangalore to enable date to issue technical clearance for the project.

(b) The Deposit amount payable by the project allottee to Karnataka Renewable Energy Development Limited, Bangalore shall be adjusted towards a Detailed Project Report processing fee.

3. The allottee shall achieve financial closure within six months from the date of technical clearance for the Detailed Project Report by Karnataka Renewable Energy Development Limited, Bangalore.
4. The allottee shall take action to complete the project implementation within 12 months from the date of achieving financial closure.
5. Failure to reach any of the project milestones specified in Sl. No. 2,3, & 4 in the same order would constitute sufficient grounds to result in automatic cancellation of allotment. No notice on this account will be given to the allottee.
6. The project Developer shall enter into a Wheeling and Banking Agreement with Karnataka Power Transmission Corporation Limited (KPTCL) IN CASE OF SELLING POWER TO the third party and Power Purchase Agreement in case of KPTCL.
7. The allottee Company may seek full co-operation from the concerned Officers of the Government at the District and State level to ensure speedy completion of the project.
8. In the allotted site if any of the Government Project comes up, the Government Projects will have priority and the developer should not claim any compensation.
9. The Developer is wholly responsible for the objections raised by local people if any.

By Order and in the Name of the Governor of Karnataka,

P.R. 2259

**S.J. SAMPATH KUMAR**

Under Secretary to Government

Energy Department

**Sub :** Allotment of 1.00 MW Grid Connected Solar Photovoltaic Power Plant to M/s Priyadarshini Green Power Project–reg.

**Read :**
1 Ministry of New & Renewable Energy, Government Of India, New Delhi letter No: 32/61/2007-08/PVSE dated: 24.1.2008.
2 Letter No: KRED/07/SPVGCPP-PGPP/2009-10/962 dated: 15/16.06.2009 received from the Managing Director, Karnataka Renewable Energy Development Limited, Bangalore.
3 Review meeting held on 4.08.2009.

**PREAMBLE:**

In the letter read at (1) above Ministry of New & Renewable Energy (MNRE) has issued guidelines for Demonstration Programme on Grid Interactive Solar Photovoltaic Power Generation. MNRE will provide subsidy of Rs. 12/- per Kwh of power generated through Solar Photovoltaic Power Plant and which is supplied to grid with minimum of 1.00 MW generation and maximum of 5.00 MW at a place. The developer has to approach Ministry of New & Renewable Energy through KREDL after acquisition of land for the project and entering into PPA with ESCOMs.

In the letter read at (2) above, the Managing Director, Karnataka Renewable Energy Development Limited, Bangalore has recommended for allotment of 1.00 MW capacity of Grid Connected Solar Photovoltaic Power Plant to M/s Priyadarshini Green Power Project at Chikkakurugodu village, Gouribidanur Taluk, Chikkaballapur District.

The proposal was placed before the review meeting held on 4.08.2009 under chairmanship of Principal Secretary to Government, Energy Department read at (3) above and the project was recommended for allotment. Hence the Order :-

1.(ಅ) ಸದರಿ ಯೋಜನೆಯಿಂದ ಕೆಳ ತೊರೆ ಮತ್ತು ಮೇಲ್ತೊರೆ ಯೋಜನೆಗಳಿಗೆ ಯಾವುದೇ ಹಾನಿಯಾಗಬಾರದು.

(ಆ) ಹಂಚಿಕೆದಾರರು ಈ ಆದೇಶ ಹೊರಡಿಸಿದ ನಲ್ವತ್ತೈದು ದಿನಗಳೊಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ದಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಇ) ಅಂತಹ ಒಡಂಬಡಿಕೆಯನ್ನು ರೂ. 400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಈ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿ.ಪಿ.ಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ಸರ್ಕಾರದ ಆದೇಶಾನುಸಾರ ವಿವರವಾದ ಯೋಜನಾ ವರದಿ ಪರಿಷ್ಕರಣಾ ಶುಲ್ಕವನ್ನು ತುಂಬುವುದು.

2.(ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ಜಲಸಂಪನ್ಮೂಲ ಇಲಾಖೆ, ಅರಣ್ಯ, ಜೀವಿಶಾಸ್ತ್ರ & ಪರಿಸರ ಇಲಾಖೆ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ ಮತ್ತು ಕಂದಾಯ ಇಲಾಖೆಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಸಿಯಲ್ ಕ್ಲೋಷರ್‌ನ್ನು ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2, 3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್ತನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತಕ್ಕೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ / ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

8. ಈ ಕಿರು ಜಲ ವಿದ್ಯುತ್ ಯೋಜನೆಯ ಸ್ಥಳದಲ್ಲಿ ಯಾವುದಾದರು ಸರ್ಕಾರಿ ಜಲ ವಿದ್ಯುತ್ / ನೀರಾವರಿ / ಕುಡಿಯುವ ನೀರಿನ ಯೋಜನೆಗಳು ಬಂದಲ್ಲಿ ಸರ್ಕಾರಿ ಯೋಜನೆಗಳಿಗೆ ಮೊದಲ ಆದ್ಯತೆ ದೊರಕುವುದು ಹಾಗೂ ಈ ಯೋಜನೆಗೆ ಯಾವುದಾದರೂ ಇತರೆ ಯೋಜನೆಗಳಿಂದ ಧಕ್ಕೆಯಾದ್ದಲ್ಲಿ ಯಾವುದೇ ಪರಿಹಾರವನ್ನು ನಿರೀಕ್ಷಿಸುವಂತಿಲ್ಲ.

9. ಸ್ಥಳೀಯವಾಗಿ ಉದ್ಭವಿಸುವ ಯಾವುದಾದರೂ ಆಕ್ಷೇಪಣೆಗಳಿಗೆ ಅಭಿವೃದ್ಧಿದಾರರೇ ಸಂಪೂರ್ಣವಾಗಿ ಹೊಣೆಗಾರರಾಗಿರುತ್ತಾರೆ.

10. ಕರ್ನಾಟಕ ವಿದ್ಯುತ್ ನಿಗಮ ನಿಯಮಿತದ ಯಾವುದೇ ಯೋಜನೆಗಳಿಂದಾಗಿ ಸದರಿ ಯೋಜನೆಯು ಮುಳುಗಡೆಯಾದ್ದಲ್ಲಿ, ಒದಗಬಹುದಾದ ಸಂಪೂರ್ಣ ತೊಂದರೆಗಳಿಗೆ ಅಭಿವೃದ್ಧಿದಾರರೇ ಪೂರ್ಣ ಜವಾಬ್ದಾರರಾಗಿರುತ್ತಾರೆ.

11. ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

12. ಡಿ.ಪಿ.ಆರ್. ತಯಾರು ಮಾಡಿದ ಮೇಲೆ ಕ್ರೆಡಲ್ ಸಂಸ್ಥೆಯು ಪರಿಶೀಲಿಸಿ ನಂತರ ಇತರ ಸಂಬಂಧಿಸಿದ ಇಲಾಖೆಗಳಿಗೆ ಡಿ.ಪಿ.ಆರ್. ಸಲ್ಲಿಸುವುದು ಹಾಗೂ ತದನಂತರ ತಾಂತ್ರಿಕ ಅನುಮೋದನೆಗಾಗಿ ಕ್ರೆಡಲ್‌ಗೆ ಅರ್ಜಿ ಸಲ್ಲಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಜಿ. ಸಂಪತ್ ಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಇಂಧನ ಇಲಾಖೆ.

ಪಿ.ಆರ್. 2355

## ಒಳಾಡಳಿತ ಸಚಿವಾಲಯ

**ವಿಷಯ :** ಮತೀಯ ನಾಗರೀಕ ಗಲಭೆಗಳಲ್ಲಿ ತೊಂದರೆಗೊಳಗಾದವರಿಗೆ ಪರಿಹಾರ ಧನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ :** 1. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 75 ಎಸ್‌ಎಸ್‌ಟಿ 1993, ದಿನಾಂಕ:2.3.1993.
2. ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 05 ಸಿಆರ್‌ಆರ್ 2003, ದಿನಾಂಕ:24.3.2005.
3. ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಆಇ 45/ಬಿಆರ್‌ಎಸ್/2009, ದಿನಾಂಕ:21.8.2009.

**ಪ್ರಸ್ತಾವನೆ:**

ಮೇಲೆ ಓದಲಾದ (1) ಮತ್ತು (2)ರ ಆದೇಶದನ್ವಯ ಮತೀಯ, ನಾಗರೀಕ ಹಾಗೂ ಒಂದೇ ಧರ್ಮದ ವಿವಿಧ ಕೋಮುಗಳ ನಡುವೆ ನಡೆಯುವ ಗಲಭೆಗಳಲ್ಲಿ ಮೃತಪಟ್ಟ, ಗಾಯಗೊಂಡ, ಆಸ್ತಿಪಾಸ್ತಿ ನಷ್ಟ ಹೊಂದಿದವರಿಗೆ ಪರಿಹಾರ ಮಂಜೂರು ಮಾಡಲು ಪರಿಹಾರದ ಮೊತ್ತವನ್ನು ನಿಗದಿಗೊಳಿಸಿ, ಪರಿಹಾರಧನವನ್ನು ಮಂಜೂರು ಮಾಡುವ ಪೂರ್ಣ ಅಧಿಕಾರವನ್ನು ಆಯಾಯ ಜಿಲ್ಲಾಧಿಕಾರಿಗಳಿಗೆ ನೀಡಲಾಗಿದೆ ಹಾಗೂ ಮತೀಯ ಗಲಭೆಯಿಂದ ಹಾನಿಗೀಡಾದ ಅಥವಾ ನೆಲಸಮ ಹೊಂದಿದ ಪೂಜಾ ಸ್ಥಳವನ್ನು ದುರಸ್ಥಿಗೊಳಿಸುವ ಅಥವಾ ಸದರಿ ಪೂಜಾ ಸ್ಥಳವನ್ನು ಮೊದಲಿದ್ದಂತೆ ನಿರ್ಮಿಸುವ ಕುರಿತು ಸೂಕ್ತ ಕ್ರಮ ತೆಗೆದುಕೊಳ್ಳುವ ಬಗ್ಗೆಯೂ ಸಹಾ ಜಿಲ್ಲಾಧಿಕಾರಿಗಳಿಗೆ ನಿರ್ದೇಶನವನ್ನು ನೀಡಲಾಗಿದೆ.

ಇಂತಹ ಗಲಭೆಗಳಲ್ಲಿ ಸಾವು–ನೋವು ಅನುಭವಿಸಿದವರಿಗೆ, ಆಸ್ತಿ–ಪಾಸ್ತಿ ನಷ್ಟ ಹೊಂದಿದವರಿಗೆ ಪರಿಹಾರ ಮಂಜೂರು ಮಾಡುವ ಹಾಗೂ ಹಾನಿಗೊಳಗಾದ ಪೂಜಾ ಸ್ಥಳವನ್ನು ದುರಸ್ಥಿ ಮಾಡುವ ಪುನರ್ ನಿರ್ಮಾಣ ಮಾಡುವ ಕೆಲಸಗಳು ತುಂಬಾ ತುರ್ತಿನವು ಹಾಗೂ ಅಗತ್ಯವಾದವುಗಳು ಆಗಿರುವುದರಿಂದ ಮಾನವೀಯತೆ ದೃಷ್ಟಿಯಿಂದ ಅನುಕಂಪದ ಮೇರೆಗೆ ತಕ್ಷಣ ಪುನರ್ ವಸತಿ, ಪರಿಹಾರ ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ. ಆದ್ದರಿಂದ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಒದಗಿಸಿರುವ ಅನುದಾನದಿಂದ ಆಡಳಿತಾತ್ಮಕ ತೊಂದರೆಗಳನ್ನು ನಿವಾರಿಸುವ ಹಾಗೂ ಪುನರ್ ವಸತಿ ಕಾರ್ಯಕ್ರಮಗಳಗಳ ವಿಳಂಬಕ್ಕೆ ಅವಕಾಶ ಮಾಡದೆ ತ್ವರಿತವಾಗಿ ಪ್ರಕರಣಗಳನ್ನು ಇತ್ಯರ್ಥಗೊಳಿಸಲು ಅನುಕೂಲವಾಗುವಂತೆ ಓದಲಾದ (1) ಮತ್ತು (2)ರ ಸರ್ಕಾರಿ ಆದೇಶದನ್ವಯ ಅಧಿಕಾರ ಪ್ರತ್ಯಾಯೋಜನೆ ಆದೇಶ ಹೊರಡಿಸಿದೆ. ಸಂತ್ರಸ್ತರ ಪರಿಹಾರ, ಪುನರ್ವಸತಿಗಾಗಿ ಅವಶ್ಯ ಅನುದಾನ ಬಿಡುಗಡೆ ಮಾಡಲು ಉದ್ದೇಶಿಸಿ ಮೇಲೆ ಓದಲಾದ (3)ರ ಸರ್ಕಾರದ ಆದೇಶದನ್ವಯ ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಹೆಚ್‌ಡಿ 28 ಸಿಆರ್‌ಆರ್ 2009, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಿಗೆ ತಲಾ 1 ಲಕ್ಷ ರೂ.ಗಳಂತೆ ಅನುಬಂಧದಲ್ಲಿ ತೋರಿಸಿರುವ ಅನುದಾನವನ್ನು ಲೆಕ್ಕ ಶೀರ್ಷಿಕೆ "2235–60–200–3–100 (ಯೋಜನೇತರ)" ರಡಿಯಲ್ಲಿ ಒಟ್ಟು 29 ಲಕ್ಷ ರೂ.ಗಳ ಅನುದಾನವನ್ನು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಬಿಡುಗಡೆ ಮಾಡಿ ಮಂಜೂರಾತಿ ನೀಡಿದೆ.

1) ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ಗಲಭೆಗಳಿಗೆ ಸಂಬಂಧಿಸಿದಂತೆ ಕಟ್ಟಡ ದುರಸ್ಥಿ, ಪುನರ್ ನಿರ್ಮಾಣ ಮುಂತಾದ ಕಾರ್ಯಕ್ರಮಗಳಿಗೆ ಎಷ್ಟು ಪ್ರಮಾಣದ ಖರ್ಚನ್ನು ಭರಿಸಲಾಗಿದೆ ಎಂಬ ಬಗ್ಗೆ ಲೆಕ್ಕ ಪತ್ರ ದಾಖಲೆಗಳನ್ನು ನಿರ್ವಹಿಸತಕ್ಕದ್ದು.

2) ಪ್ರತಿ ಜಿಲ್ಲಾಧಿಕಾರಿಯು ಸರ್ಕಾರದಿಂದ ಬಿಡುಗಡೆ ಮಾಡಲಾದ ಅನುದಾನದಲ್ಲಿ, ವಿನಿಯೋಗಿಸಲ್ಪಟ್ಟ ಮೊತ ಹಾಗೂ ಎಷ್ಟು ಮೊತ್ತ ಉಳಿದಿದೆ ಎಂಬುದರ ಬಗೆಗಿನ ವಿವರವಾದ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

3) ಜಿಲ್ಲಾಧಿಕಾರಿಗಳು ಸರ್ಕಾರದಿಂದ ಹಂಚಿಕೆಯಾದ ಅನುದಾನವನ್ನು ಬಿಡುಗಡೆ (ವಿತರಣೆ) ಮಾಡಲು ಮಾತ್ರ ಖಜಾನೆಯಿಂದ ಹಣ ಪಡೆಯಬಹುದು. ಅನುದಾನವನ್ನು ತೆಗೆದು ವೈಯಕ್ತಿಕ ಠೇವಣಿ ಅಥವಾ ಯಾವುದೇ ಖಾತೆಗೆ ಜಮಾ ಮಾಡತಕ್ಕದ್ದಲ್ಲ. ಈ ಆರ್ಥಿಕ ವರ್ಷದ ಕೊನೆಯಲ್ಲಿ ತಪ್ಪದೇ ಜರೂರಾಗಿ ಉಳಿದ ಅನುದಾನವನ್ನು ಸರ್ಕಾರಕ್ಕೆ ಅಧ್ಯರ್ಪಣೆ ಮಾಡತಕ್ಕದ್ದು (ನಿಗಧಿತ ಅವಧಿಯೊಳಗೆ). ಹೀಗೆ ಅಧ್ಯರ್ಪಣೆ ಮಾಡಲು ವಿಳಂಬವಾದಲ್ಲಿ ಸಂಬಂಧಪಟ್ಟ ಜಿಲ್ಲಾಧಿಕಾರಿಗಳೇ ಹೊಣೆಯಾಗಿರುತ್ತಾರೆ. ಇದು ಅತಿ ಮುಖ್ಯವೆಂದು ಪರಿಗಣಿಸುವುದು

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ:ಆಇ/691/ವೆಚ್ಚ–11/2009, ದಿನಾಂಕ:25.8.2009 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ)

**ಸರ್ಕಾರದ ಆದೇಶ ಸಂಖ್ಯೆ:ಹೆಚ್‌ಡಿ 28 ಸಿಆರ್‌ಆರ್ 2009, ದಿ:21ನೇ ಅಕ್ಟೋಬರ್ 2009**

**ಅನುಬಂಧ**

| ಕ್ರ. ಸಂ. | ಜಿಲ್ಲೆಗಳ ಹೆಸರು | ಮೊಬಲಗು (ಲಕ್ಷಗಳಲ್ಲಿ) | ಕ್ರ. ಸಂ. | ಜಿಲ್ಲೆಗಳ ಹೆಸರು | ಮೊಬಲಗು (ಲಕ್ಷಗಳಲ್ಲಿ) |
|---|---|---|---|---|---|
| 1 | ಬೆಂಗಳೂರು ನಗರ | 1.00 ಲಕ್ಷ | 2 | ಬೆಂಗಳೂರು ಗ್ರಾಮಾಂತರ | 1.00 ಲಕ್ಷ |
| 3 | ಬಾಗಲಕೋಟೆ | 1.00 ಲಕ್ಷ | 4 | ಬೆಳಗಾವಿ | 1.00 ಲಕ್ಷ |
| 5 | ಬಳ್ಳಾರಿ | 1.00 ಲಕ್ಷ | 6 | ಬೀದರ್ | 1.00 ಲಕ್ಷ |
| 7 | ಬಿಜಾಪುರ | 1.00 ಲಕ್ಷ | 8 | ಚಾಮರಾಜನಗರ | 1.00 ಲಕ್ಷ |
| 9 | ಚಿಕ್ಕಮಗಳೂರು | 1.00 ಲಕ್ಷ | 10 | ಚಿತ್ರದುರ್ಗ | 1.00 ಲಕ್ಷ |
| 11 | ದಾವಣಗೆರೆ | 1.00 ಲಕ್ಷ | 12 | ದಕ್ಷಿಣ ಕನ್ನಡ | 1.00 ಲಕ್ಷ |
| 13 | ಧಾರವಾಡ | 1.00 ಲಕ್ಷ | 14 | ಗದಗ್ | 1.00 ಲಕ್ಷ |
| 15 | ಗುಲ್ಬರ್ಗಾ | 1.00 ಲಕ್ಷ | 16 | ಹಾಸನ | 1.00 ಲಕ್ಷ |
| 17 | ಹಾವೇರಿ | 1.00 ಲಕ್ಷ | 18 | ಕೊಡಗು | 1.00 ಲಕ್ಷ |
| 19 | ಕೊಪ್ಪಳ | 1.00 ಲಕ್ಷ | 20 | ಕೋಲಾರ | 1.00 ಲಕ್ಷ |
| 21 | ಮಂಡ್ಯ | 1.00 ಲಕ್ಷ | 22 | ಮೈಸೂರು | 1.00 ಲಕ್ಷ |
| 23 | ರಾಯಚೂರು | 1.00 ಲಕ್ಷ | 24 | ಶಿವಮೊಗ್ಗ | 1.00 ಲಕ್ಷ |
| 25 | ತುಮಕೂರು | 1.00 ಲಕ್ಷ | 26 | ಉತ್ತರ ಕನ್ನಡ | 1.00 ಲಕ್ಷ |
| 27 | ಉಡುಪಿ | 1.00 ಲಕ್ಷ | 28 | ಚಿಕ್ಕಬಳ್ಳಾಪುರ | 1.00 ಲಕ್ಷ |
| 29 | ರಾಮನಗರ | 1.00 ಲಕ್ಷ | | | |

**ಕೆ. ಸಿದ್ದಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ. (ಕಾನೂನು ಮತ್ತು ಸುವ್ಯವಸ್ಥೆ)

ಪಿ.ಆರ್. 2459

## ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಸಚಿವಾಲಯ

**ವಿಷಯ :** ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ಜಿಲ್ಲಾ ಮುಖ್ಯ ರಸ್ತೆಗಳನ್ನು ಕೆಳದರ್ಜೆಗಿಳಿಸುವ ಬಗ್ಗೆ.

**ಓದಲಾಗಿದೆ :** ಶ್ರೀಸಿ.ಎಸ್. ಪುಟ್ಟರಾಜು ಮೇಲುಕೋಟೆ ವಿಧಾನ ಸಭಾ ಸದಸ್ಯರು, ಇವರ ಪತ್ರದ ದಿನಾಂಕ:20.10.2009

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರದಲ್ಲಿ ಶ್ರೀ ಸಿ. ಎಸ್. ಪುಟ್ಟರಾಜು, ಮೇಲುಕೋಟೆ ವಿಧಾನ ಸಭಾ ಸದಸ್ಯರು, ಮಂಡ್ಯ ಜಿಲ್ಲೆ, ಪಾಮಡವಪುರ ತಾಲ್ಲೂಕಿನ ಜಿಲ್ಲಾ ಮುಖ್ಯ ರಸ್ತೆಗಳನ್ನು ಲೋಕೋಪಯೋಗಿ ಇಲಾಖೆಯಲ್ಲಿ ಅನುದಾನದ ಕೊರತೆಯಿಂದ ಸಮಗ್ರವಾಗಿ ಅಭಿವೃದ್ಧಿಪಡಿಸಲು ಸಾಧ್ಯವಾಗದೇ ಇರುವುದರಿಂದ ಈ ಕೆಳಕಂಡ ರಸ್ತೆಗಳನ್ನು ಕೆಳದರ್ಜೆಗಿಳಿಸಿ ಪಿ.ಎಂ.ಜಿ.ಎಸ್.ವೈ. ಯೋಜನೆಯಡಿಯಲ್ಲಿ ಅಭಿವೃದ್ಧಿಪಡಿಸಲು ಕೋರಿರುತ್ತಾರೆ.

| ಕ್ರ.ಸಂ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಪಾಂಡವಪುರ ತಾಲ್ಲೋಕು ಬಿ.ಬಿ.–ಬಿ.ಟಿ. ರಸ್ತೆಯಿಂದ ಕ್ಯಾತನಹಳ್ಳಿಗೆ ಸೇರುವ ರಸ್ತೆ ಕಿಮೀ 0.00 ರಿಂದ 7.00 ಮಾರ್ಗ ಹರವು–ಚಲುವರಸನಕೊಪ್ಪಲು–ಬ್ಯಾಟೇತಿಮ್ಮನಕೊಪ್ಪಲು | 7.00 |
| 2 | ಪಾಂಡವಪುರ ತಾಲ್ಲೋಕು ಮಾಣಿಕ್ಯನಹಳ್ಳಿಯಿಂದ ಗರುಡಾಪುರಕ್ಕೆ ಸೇರುವ ರಸ್ತೆ ಕಿಮಿ 0.00 ರಿಂದ 9.00 ವರೆಗೆ ಮಾರ್ಗ ಗೌಡಗೆರೆ–ಕಾಡೇನಹಳ್ಳಿ–ಕದಲಗೆರೆ–ದೊಡ್ಡಿಘಟ್ಟ | 9.00 |
| 3 | ಪಾಂಡವಪುರ ತಾಲ್ಲೋಕು ಮಹದೇಶ್ವರಪುರದಿಂದ ಕಾಳೇನಹಳ್ಳಿಗೆ ಸೇರುವ ರಸ್ತೆ ಕಿ.ಮೀ 0.00 ರಿಂದ 10 ಕಿಮೀ ವರೆಗೆ ಮಾರ್ಗ ಅತ್ತಿಗಾನಹಳ್ಳಿ–ಕೊಡಗನಹಳ್ಳಿ–ಸುಂಕಾತೊಣ್ಣೂರು | 10.00 |

| | | |
|---|---|---|
| 4 | ಪಾಂಡವಪುರ ತಾಲ್ಲೋಕು ನಾರಾಯಣಪುರದಿಂದ ಸಿಂಗಾಪುರಕ್ಕೆ ಸೇರುವ ರಸ್ತೆ ಕಿಮೀ 0,00 ರಿಂದ 4.00 ವರೆಗೆ ಮಾರ್ಗ–ನಲ್ಲೇನಹಳ್ಳಿ–ಮಾರ್ವಳ್ಳಿ | 4.00 |
| 5 | ಪಾಂಡವಪುರ ತಾಲ್ಲೋಕು ಬಿ.ಬಿ.–ಬಿ.ಟಿ. ರಸ್ತೆಯಿಂದ ಶ್ರೀರಂಗಪಟ್ಟಣ–ಜೇವರ್ಗಿ–ರಸ್ತೆಗೆ ಸೇರುವ ರಸ್ತೆ ಕಿಮೀ 0.00 ರಿಂದ 3.25 ವರೆಗೆ ಮಾರ್ಗ ಕುಂತೀಬೆಟ್ಟ–ಹಿರೇಮರಳಿ ಮತ್ತು ಹಿರೇಮರಳಿ–ಚಿಕ್ಕಮರಳಿ | 3.25 |
| 6 | ಪಾಂಡವಪುರ ತಾಲ್ಲೋಕು ಬಿ.ಬಿ.–ಬಿ.ಟಿ. ರಸ್ತೆಯಿಂದ ಬೇವಿನಕುಪ್ಪೆ–ಶಂಭುವಿನಹಳ್ಳಿ ರಸ್ತೆಗೆ ಸೇರುವ ರಸ್ತೆ ಕಿಮೀ 0.00 ರಿಂದ 8.10 ವರೆಗೆ ಮಾರ್ಗ ಚಿಕ್ಕಮರಳಿ–ನುಗ್ಗಹಳ್ಳಿ–ಅನುವಾಳು ಮತ್ತು ನುಗ್ಗಹಳ್ಳಿ–ಕನಗನಮರಡಿ ಕೂಡು ರಸ್ತೆ | 8.10 |
| 7 | ಪಾಂಡವಪುರ ತಾಲ್ಲೋಕು ಪಾಂಡವಪುರದಿಂದ ಚಂದ್ರೆ ಶಂಕಹಳ್ಳಿ–ಕೊಡಳ್ಳಿ ಹೊಸೂರು ರಸ್ತೆ ಕಿಮೀ 0.00 ರಿಂದ 8.10 ವರೆಗೆ ಮಾರ್ಗ ಶ್ರೀರಂಗಪಟ್ಟಣ ಜೇವರ್ಗಿ–ರಸ್ತೆಗೆ ಸೇರುವ ರಸ್ತೆ. | 8.10 |
| | ಒಟ್ಟು | 49.45 |

ಮಾನ್ಯ ವಿಧಾನ ಸಭಾ ಸದಸ್ಯರ ಪ್ರಸ್ತಾವನೆಯನ್ನು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ:ಲೋಇ 564 ಸಿಆರ್ಎಂ 2009, ಬೆಂಗಳೂರು, ದಿನಾಂಕ:23ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸಂದರ್ಭದ ಹಿನ್ನೆಲೆಯಲ್ಲಿ ಮಂಡ್ಯ ಜಿಲ್ಲೆ ಪಾಂಡವಪುರ ತಾಲ್ಲೂಕಿನ ಈ ಕೆಳಕಂಡ 7(ಏಳು) ಜಿಲ್ಲಾ ಮುಖ್ಯ ರಸ್ತೆಗಳನ್ನು ನಿಯಮಾನುಸಾರ ಕೆಳದರ್ಜೆಗಿಳಿಸಿ (Denotify) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ವಶಕ್ಕೆ ನೀಡಲು ಸರ್ಕಾರದ ಅನುಮೋದನೆ ನೀಡಲಾಗಿದೆ.

| ಕ್ರ.ಸಂ | ರಸ್ತೆಯ ವಿವರಗಳು | ಉದ್ದ (ಕಿ.ಮೀ) |
|---|---|---|
| 1 | ಪಾಂಡವಪುರ ತಾಲ್ಲೋಕು ಬಿ.ಬಿ.–ಬಿ.ಟಿ. ರಸ್ತೆಯಿಂದ ಕ್ಯಾತನಹಳ್ಳಿಗೆ ಸೇರುವ ರಸ್ತೆ ಕಿಮೀ 0.00 ರಿಂದ 7.00 ಮಾರ್ಗ ಹರವು–ಚಲುವರಸನಕೊಪ್ಪಲು–ಬ್ಯಾಟೀತಿಮ್ಮನಕೊಪ್ಪಲು | 7.00 |
| 2 | ಪಾಂಡವಪುರ ತಾಲ್ಲೋಕು ಮಾಣಿಕ್ಯನಹಳ್ಳಿಯಿಂದ ಗರುಡಾಪುರಕ್ಕೆ ಸೇರುವ ರಸ್ತೆ ಕಿಮಿ 0.00 ರಿಂದ 9.00 ವರೆಗೆ ಮಾರ್ಗ ಗೌಡಗೆರೆ–ಕಾಡೇನಹಳ್ಳಿ–ಕದಲಗೆರೆ–ದೊಡ್ಡಿಘಟ್ಟ | 9.00 |
| 3 | ಪಾಂಡವಪುರ ತಾಲ್ಲೋಕು ಮಹದೇಶ್ವರಪುರದಿಂದ ಕಾಳೇನಹಳ್ಳಿಗೆ ಸೇರುವ ರಸ್ತೆ ಕಿ.ಮೀ 0.00 ರಿಂದ 10 ಕಿಮೀ ವರೆಗೆ ಮಾರ್ಗ ಅತ್ತಿಗಾನಹಳ್ಳಿ–ಕೊಡಗನಹಳ್ಳಿ–ಸುಂಕಾತೊಣ್ಣೂರು | 10.00 |
| 4 | ಪಾಂಡವಪುರ ತಾಲ್ಲೋಕು ನಾರಾಯಣಪುರದಿಂದ ಸಿಂಗಾಪುರಕ್ಕೆ ಸೇರುವ ರಸ್ತೆ ಕಿಮೀ 0,00 ರಿಂದ 4.00 ವರೆಗೆ ಮಾರ್ಗ–ನಲ್ಲೇನಹಳ್ಳಿ–ಮಾರ್ವಳ್ಳಿ | 4.00 |
| 5 | ಪಾಂಡವಪುರ ತಾಲ್ಲೋಕು ಬಿ.ಬಿ.–ಬಿ.ಟಿ. ರಸ್ತೆಯಿಂದ ಶ್ರೀರಂಗಪಟ್ಟಣ–ಜೇವರ್ಗಿ–ರಸ್ತೆಗೆ ಸೇರುವ ರಸ್ತೆ ಕಿಮೀ 0.00 ರಿಂದ 3.25 ವರೆಗೆ ಮಾರ್ಗ ಕುಂತೀಬೆಟ್ಟ–ಹಿರೇಮರಳಿ ಮತ್ತು ಹಿರೇಮರಳಿ–ಚಿಕ್ಕಮರಳಿ | 3.25 |
| 6 | ಪಾಂಡವಪುರ ತಾಲ್ಲೋಕು ಬಿ.ಬಿ.–ಬಿ.ಟಿ. ರಸ್ತೆಯಿಂದ ಬೇವಿನಕುಪ್ಪೆ–ಶಂಭುವಿನಹಳ್ಳಿ ರಸ್ತೆಗೆ ಸೇರುವ ರಸ್ತೆ ಕಿಮೀ 0.00 ರಿಂದ 8.10 ವರೆಗೆ ಮಾರ್ಗ ಚಿಕ್ಕಮರಳಿ–ನುಗ್ಗಹಳ್ಳಿ–ಅನುವಾಳು ಮತ್ತು ನುಗ್ಗಹಳ್ಳಿ–ಕನಗನಮರಡಿ ಕೂಡು ರಸ್ತೆ | 8.10 |
| 7 | ಪಾಂಡವಪುರ ತಾಲ್ಲೋಕು ಪಾಂಡವಪುರದಿಂದ ಚಂದ್ರೆ ಶಂಕಹಳ್ಳಿ–ಕೊಡಳ್ಳಿ ಹೊಸೂರು ರಸ್ತೆ ಕಿಮೀ 0.00 ರಿಂದ 8.10 ವರೆಗೆ ಮಾರ್ಗ ಶ್ರೀರಂಗಪಟ್ಟಣ ಜೇವರ್ಗಿ–ರಸ್ತೆಗೆ ಸೇರುವ ರಸ್ತೆ. | 8.10 |
| | ಒಟ್ಟು | 49.45 |

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2460

**ಎಂ. ದೇವೀಪ್ರಸಾದ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಲೋಕೋಪಯೋಗಿ, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ. (ಸಂಪರ್ಕ)

## ವಾಣಿಜ್ಯ ಮತ್ತು ಕೈಗಾರಿಕೆ ಸಚಿವಾಲಯ

**ವಿಷಯ :** ಶ್ರೀ ಹೆಚ್.ಬಿ. ಕುಳ್ಳಾನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಸರ್ಕಾರಿ ರೇಷ್ಮೆ ಮಾದರಿ ಬಿತ್ತನೆ ಕೋಠಿ, ಹಾಸನ (ಹಾಲಿ ಅಮಾನತ್ತಿನಲ್ಲಿರುವ) ಇವರ ವಿರುದ್ಧ ಶಿಸ್ತು ಕ್ರಮ–ಸೇವೆಯಿಂದ ವಜಾಗೊಳಿಸಿ ಇವರಿಂದ ಸರ್ಕಾರಕ್ಕೆ ನಷ್ಟ ಉಂಟಾದ ರೂ. 4,33,208/–ಗಳ ವಸೂಲಾತಿ ಬಗ್ಗೆ.

**ಓದಲಾಗಿದೆ :**
1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:09: 1999–2000 ದಿ:17.7.2000.
2. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:09–1999–2000 ದಿ:7.12.2000.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:09–1999–2000 ದಿ: 27.01.2004.
4. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:09–1999–2000 ದಿ:6.2.2006.
5. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:02–2004–05 ದಿ:3.3.2005.
6. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:02–2004–05 ದಿ:27.10.2005.
7. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:02–2004–05 ದಿ:5.3.2006.
8. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:02–2004–05 ದಿ:1.6.2006.
9. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:09–1999–2000 ದಿ:24.5.2006.
10. ಸರ್ಕಾರದ ಪತ್ರ ಸಂ:ವಾಕೈ 39 ರೇಸೇವಿ 2006 ದಿ:20.1.2007.
11. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ:ಪಿಎಸ್‌ಸಿ/197/ಸಿಎನ್‌ಎಸ್/06 ದಿ:29.6.2007.
12. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಆದೇಶ ಸಂ:ಸಿ3ಎ:ಶಿಸ್ತು:09–1999–2000 ದಿ:30.9.2008.

**ಪ್ರಸ್ತಾವನೆ:**

ಶ್ರೀ ಹೆಚ್.ಬಿ. ಕುಳ್ಳಾನಾಯಕ್, ರೇಷ್ಮೆ ಸಹಾಯುಕ ನಿರ್ದೇಶಕರು, ಸರ್ಕಾರಿ ರೇಷ್ಮೆ ಮಾದರಿ ಬಿತ್ತನೆ ಕೋಠಿ ಹಾಸನ (ಹಾಲಿ ಅಮಾನತ್ತಿನಲ್ಲಿ) ಇವರು ಈ ಹಿಂದೆ ದಿನಾಂಕ:26.5.1993 ರಿಂದ 26.6.1995ರವರೆಗೆ ಚಾಮರಾಜನಗರದಲ್ಲಿ ರೇಷ್ಮೆ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದಾಗ ಎಸಗಿದ ಆರ್ಥಿಕ ದುರುಪಯೋಗ, ಅಧಿಕಾರ ದುರುಪಯೋಗ, ಸರ್ಕಾರಿ ಕೆಲಸದಲ್ಲಿ ಕರ್ತವ್ಯ ಲೋಪ ಹಾಗೂ ಕಾರ್ಯ ನಿರ್ಲಕ್ಷ್ಯತೆ ಬಗ್ಗೆ ಆರೋಪಗಳಿದ್ದು ಕರ್ನಾಟಕ ನಾಗರೀಕ ಸೇವಾ (ಸಿಸಿ &ಎ) ನಿಯಮ 11ರಡಿಯಲ್ಲಿ ಈ ಬಗ್ಗೆ ತಿಳುವಳಿಕೆ ಪತ್ರದೊಂದಿಗೆ ಆರೋಪ ಪಟ್ಟಿಯನ್ನು ಶ್ರೀ ಹೆಚ್.ಬಿ. ಕುಳ್ಳಾನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಇವರಿಗೆ ಜಾರಿಗೊಳಿಸಲಾಗಿದ್ದಿತು. ಆರೋಪಿತ ಅಧಿಕಾರಿಯು ಆರೋಪ ಪಟ್ಟಿಯನ್ನು ಸ್ವೀಕರಿಸಿ ತಮ್ಮ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿದ ಹಿನ್ನೆಲೆಯಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ಸಲುವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (1)ರಲ್ಲಿನ ಆದೇಶದಂತೆ ರೇಷ್ಮೆ ಉಪ ನಿರ್ದೇಶಕರು (ಜಿಲ್ಲಾ ಪಂಚಾಯತ್), ಮಂಡ್ಯ ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಅದೇ ಕಛೇರಿಯ ಪತ್ರಾಂಕಿತ ವ್ಯವಸ್ಥಾಪಕರು–2 ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಲಾಗಿತ್ತು. ಈ ಹಂತದಲ್ಲಿ ಆರೋಪಿತ ಅಧಿಕಾರಿಯು ಮನವಿಯನ್ನು ಸಲ್ಲಿಸಿ ಹಾಲಿ ನೇಮಕಗೊಂಡಿದ್ದ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ಬದಲಾಯಿಸಲು ಕೋರಿದ್ದರಿಂದ ಇವರ ಮನವಿಯನ್ನು ಪುರಸ್ಕರಿಸಿ ಮೇಲೆ ಓದಲಾದ ಕ್ರಮಸಂಖ್ಯೆ (2)ರಲ್ಲಿನ ಆದೇಶದಂತೆ ರೇಷ್ಮೆ ಜಂಟಿ ನಿರ್ದೇಶಕರು, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿಯೂ ಹಾಗೂ ಅದೇ ಕಛೇರಿಯ ಪತ್ರಾಂಕಿತ ವ್ಯವಸ್ಥಾಪಕರು–2 ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಕ ಮಾಡಲಾಯಿತು. ಆದರೆ ಆರೋಪಿತ ಅಧಿಕಾರಿಯು ಇಲಾಖಾ ವಿಚಾರಣೆಗೆ ಸರಿಯಾಗಿ ಹಾಜರಾಗದೆ ಗೈರುಹಾಜರಿಯಾದ ಕಾರಣ ವಿಚಾರಣೆಯು ಅನವಶ್ಯಕವಾಗಿ ವಿಳಂಬವಾಗುತ್ತಿದೆಯೆಂದು ವಿಚಾರಣಾಧಿಕಾರಿಗಳು ಶಿಸ್ತು ಪ್ರಾಧಿಕಾರಕ್ಕೆ ತಿಳಿಸಿ ವಿಚಾರಣೆಯನ್ನು ಪೂರ್ಣಗೊಳಿಸದಿರುವ ಬಗ್ಗೆ ತಮ್ಮ ಅಸಹಾಯಕತೆಯನ್ನು ವ್ಯಕ್ತಪಡಿಸಿರುತ್ತಾರೆ. ಇದರಿಂದ ಇಲಾಖಾ ವಿಚಾರಣೆಯನ್ನು ಸಿ.ಸಿ.ಎ ನಿಯಮ 11(20)ರಡಿಯಲ್ಲಿ

ನಡೆಸಲಾಗುವುದೆಂದು ಆರೋಪಿತ ಅಧಿಕಾರಿಗೆ ಎಚ್ಚರಿಸಿದ ನಂತರ ಶಿಸ್ತು ಪ್ರಾಧಿಕಾರಕ್ಕೆ ಆರೋಪಿತ ಅಧಿಕಾರಿಯು ಮನವಿಯನ್ನು ಸಲ್ಲಿಸಿ ಮತ್ತೊಮ್ಮೆ ವಿಚಾರಣಾಧಿಕಾರಿಯನ್ನು ಬದಲಾಯಿಸಲು ಕೋರಿದ್ದರು. ಆರೋಪಿತ ಅಧಿಕಾರಿಯ ಈ ಮನವಿಯನ್ನೂ ಸಹ ಪುರಸ್ಕರಿಸಿ ಮೇಲೆ ಓದಲಾದ ಕ್ರಮಸಂಖ್ಯೆ (3)ರಲ್ಲಿನ ಆದೇಶದಂತೆ ರೇಷ್ಮೆ ಉಪ ನಿರ್ದೇಶಕರು, ಕೇಂದ್ರ ಕಛೇರಿ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು ಮತ್ತು ರೇಷ್ಮೆ ವಿನಿಮಯ ಕೇಂದ್ರ ಬೆಂಗಳುರು ಕಛೇರಿಯ ಪತ್ರಾಂಕಿತ ವ್ಯವಸ್ಥಾಪಕರ–2ನ್ನು ಮಂಡನಾಧಿಕಾರಿಯನ್ನಾಗಿ ಮುಂದುವರೆಸಲಾಯಿತು. ಇಲಾಖಾ ವಿಚಾರಣೆಯ ನಂತರ ಆರೋಪಿತ ಅಧಿಕಾರಿಯು ಚಾಮರಾಜನಗರದ ರೇಷ್ಮೆ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ರೂ. 3,41,088/–ಗಳ ಮೊತ್ತವು ಸರ್ಕಾರಕ್ಕೆ ನಷ್ಟವುಂಟಾಗಲು ಕಾರಣರಾಗಿರುವುದು ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿದ ವಿಚಾರಣಾ ವರದಿಯನ್ನು ಆಧರಿಸಿ ಶ್ರೀ ಹೆಚ್.ಬಿ. ಕುಳ್ಳನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಇವರಿಗೆ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟದ ವಸೂಲಿಯೊಂದಿಗೆ ಕಠಿಣ ದಂಡನೆಯನ್ನು ವಿಧಿಸುವುದು ಸಮಂಜಸವೆಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಅಭಿಪ್ರಾಯಪಟ್ಟು ಕರ್ನಾಟಕ ನಾಗರೀಕ ಸೇವಾ (ಸಿ.ಸಿ &ಎ) ನಿಯಮ (8)ರ ಅಡಿಯಲ್ಲಿ ಆದೇಶವನ್ನು ಹೊರಡಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (4)ರ ಪತ್ರದಲ್ಲಿ ಪ್ರಸ್ತಾವನೆಯೊಂದಿಗೆ ಸಮಗ್ರ ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

2) ಶ್ರೀ ಹೆಚ್.ಬಿ. ಕುಳ್ಳನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಇವರು ರೇಷ್ಮೆ ಗೂಡಿನ ಮಾರುಕಟ್ಟೆ ಕುಶಾಲನಗರ, ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ ಸದರಿ ಅಧಿಕಾರಿಯ ಮೇಲೆ ಆರ್ಥಿಕ ದುರುಪಯೋಗ, ಅಧಿಕಾರ, ದುರುಪಯೋಗ, ಸರ್ಕಾರಿ ಕೆಲಸದಲ್ಲಿ ಕರ್ತವ್ಯ ಲೋಪ ಹಾಗೂ ಕಾರ್ಯ ನಿರ್ಲಕ್ಷ್ಯತೆಯ ಆರೋಪಗಳಿದ್ದು ಕರ್ನಾಟಕ ನಾಗರೀಕ ಸೇವಾ (ಸಿಸಿ&ಎ) ನಿಯಮ 11ರಡಿಯಲ್ಲಿ ಈ ಬಗ್ಗೆ ತಿಳಿವಳಿಕೆ ಪತ್ರದೊಂದಿಗೆ ಆರೋಪ ಪಟ್ಟಿಯನ್ನು ಶ್ರೀ ಹೆಚ್.ಬಿ. ಕುಳ್ಳನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಇವರಿಗೆ ಜಾರಿಗೊಳಿಸಲಾಗಿದ್ದಿತು. ಆರೋಪಿತ ಅಧಿಕಾರಿಯು ಆರೋಪಪಟ್ಟಿಯನ್ನು ಸ್ವೀಕರಿಸಿ ತಮ್ಮ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿದ ಹಿನ್ನೆಲೆಯಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ಸಲುವಾಗಿ ಮೇಲೆ ಓದಲಾದ ಕರಮ ಸಂಖ್ಯೆ (5)ರಲ್ಲಿನ ಆದೇಶದಂತೆ ವಿಚಾರಣಾಧಿಕಾರಿಯನ್ನು ನೇಮಕ ಮಾಡಲಾಯಿತು. ಈ ಹಂತದಲ್ಲಿ ಆರೋಪಿತ ಅಧಿಕಾರಿಯ ಮೇಲೆ ಮತ್ತೊಂದು ಹಣದ ದುರುಪಯೋಗದ ಆರೋಪ ಬಂದ ಕಾರಣದಿಂದ ಕರ್ನಾಟಕ ನಾಗರೀಕ ಸೇವಾ (ಸಿಸಿ&ಎ) ನಿಯಮ 11ರಡಿಯಲ್ಲಿ ಈ ಬಗ್ಗೆ ತಿಳುವಳಿಕೆ ಪತ್ರದೊಂದಿಗೆ ಆರೋಪ ಪಟ್ಟಿಯನ್ನು ಶ್ರೀ ಹೆಚ್.ಬಿ. ಕುಳ್ಳನಾಯಕ್ ರೇಷ್ಮೆ ಸಹಾಯಕ ನಿರ್ದೇಶಕರು, ಇವರಿಗೆ ಜಾರಿಗೊಳಿಸಲಾಗಿದ್ದಿತು. ಆರೋಪಿತ ಅಧಿಕಾರಿಯು ಆರೋಪಪಟ್ಟಿಯನ್ನು ಸ್ವೀಕರಿಸಿ ತಮ್ಮ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿದ ಹಿನ್ನೆಲೆಯಲ್ಲಿ ಪ್ರಕರಣದ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ಸಲುವಾಗಿ ಮೇಲೆ ಓದಲಾದ ಕ್ರಮ ಸಂಖ್ಯೆ (6)ರಲ್ಲಿನ ಆದೇಶದಂತೆ ವಿಚಾರಣಾಧಿಕಾರಿಯಾಗಿ ರೇಷ್ಮೆ ಜಂಟಿ ನಿರ್ದೇಶಕರು, ಹಾಸನ ಮತ್ತು ಪತ್ರಾಂಕಿತ ವ್ಯವಸ್ಥಾಪಕರು, ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ ಹಾಸನ ಇವರನ್ನು ಮಂಡನಾಧಿಕಾರಿಯಾಗಿ ನೇಮಕ ಮಾಡಲಾಯಿತು. ಈ ನಡುವೆ ಆಡಳಿತಾತ್ಮಕ ವ್ಯವಸ್ಥೆಯಲ್ಲಿ ಉಂಟಾದ ಬದಲಾವಣೆಯಿಂದ ರೇಷ್ಮೆ ಜಂಟಿ ನಿರ್ದೇಶಕರು, ಹಾಸನ ಇವರ ಹುದ್ದೆಯು ಮೈಸೂರಿಗೆ ಸ್ಥಳಾಂತರಗೊಂಡಿರುತ್ತದೆ ಹಾಗೂ ರೇಷ್ಮೆ ಇದೇ ಕಛೇರಿಯಲ್ಲಿರುವ ಪತ್ರಾಂಕಿತ ವ್ಯವಸ್ಥಾಪಕರ ಹುದ್ದೆಯು ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ಬಿಳಿದೇವಾಲಯಕ್ಕೆ ಸ್ಥಳಾಂತರಗೊಂಡಿರುತ್ತದೆ. ಈ ಬದಲಾವಣೆಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಬಿ. ಕುಳ್ಳನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಇವರ ವಿರುದ್ಧದ ಎರಡೂ ಆರೋಪಗಳಿಗೆ ಸಂಬಂಧಿಸಿದಂತೆ ವಿಚಾರಣೆ ನಡೆಸಲು ಮೇಲೆ ಓದಲಾದ ಕ್ರಮಸಂಖ್ಯೆ (7)ರಲ್ಲಿನ ಆದೇಶದಲ್ಲಿ ರೇಷ್ಮೆ ಜಂಟಿ ನಿರ್ದೇಶಕರು, ಮೈಸೂರು, ಇವರನ್ನು ವಿಚಾರಣಾಧಿಕಾರಿಗಳಾಗಿಯೂ ಹಾಗೂ ರೇಷ್ಮೆ ಉಪ ನಿರ್ದೇಶಕರು, ಜಿಲ್ಲಾ ಪಂಚಾಯತ್ ಮೈಸೂರು ಇವರ ಕಛೇರಿಯ ಪತ್ರಾಂಕಿತ ವ್ಯವಸ್ಥಾಪಕರು–2ರವರನ್ನು ಮಂಡನಾಧಿಕಾರಿಯಾಗಿಯೂ ನೇಮಕ ಮಾಡಲಾಯಿತು. ಇದೇ ಅವಧಿಯಲ್ಲಿನ ಮತ್ತೊಂದು ಆರೋಪಕ್ಕೆ ಸಂಬಂಧಿಸಿದಂತೆ ವಿಚಾರಣೆಯನ್ನು ನಡೆಸುವ ಸಲುವಾಗಿ ಈಗಾಗಲೇ ನೇಮಕ ಮಾಡಲಾಗಿದ್ದ ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ಈ ಪ್ರಕರಣದ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯಾಗಿ ನೇಮಿಸುವುದು ಸೂಕ್ತವೆಂದು ಪರಿಗಣಿಸಿ ಮೇಲೆ ಓದಲಾದ ಕ್ರಮಸಂಖ್ಯೆ (8)ರಲ್ಲಿನ ಆದೇಶದಲ್ಲಿ ನೇಮಕ ಮಾಡಲಾಗಿರುತ್ತದೆ. ಇಲಾಖಾ ವಿಚಾರಣೆಯ ನಂತರ ಆರೋಪಿತ ಅಧಿಕಾರಿಯು ಕುಶಾಲನಗರದ ರೇಷ್ಮೆ ಸಹಾಯಕ ನಿರ್ದೇಶಕರಾಗಿ ಕಾರ್ಯ ನಿರ್ವಹಸುತ್ತಿದ್ದ ಅವಧಿಯಲ್ಲಿ ರೂ. 92.120.–ಗಳ ಮೊತ್ತವು ಸರ್ಕಾರಕ್ಕೆ ನಷ್ಟವುಂಟಾಗಲು ಕಾರಣರಾಗಿರುವುದು ಸಾಕ್ಷ್ಯಾಧಾರಗಳಿಂದ ಸಾಬೀತಾಗಿರುವುದಾಗಿ ವಿಚಾರಣಾಧಿಕಾರಿಗಳು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿದ ವಿಚಾರಣಾ ವರದಿಯನ್ನು ಆಧರಿಸಿ ಶ್ರೀ ಹೆಚ್.ಬಿ. ಕುಳ್ಳನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಇವರಿಗೆ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟದ ವಸೂಲಿಯೊಂದಿಗೆ ಕಠಣ ದಂಡನೆಯನ್ನು ವಿಧಿಸುವುದು ಸಮಂಜಸವೆಂದು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಅಭಿಪ್ರಾಯಪಟ್ಟು ಕರ್ನಾಟಕ ನಾಗರೀಕ ಸೇವಾ (ಸಿಸಿ &ಎ) ನಿಯಮ (8)ರ ಅಡಿಯಲ್ಲಿ ಆದೇಶವನ್ನು ಹೊರಡಿಸುವಂತೆ ಮೇಲೆ ಓದಲಾದ ಕ್ರಮಸಂಖ್ಯೆ (12)ರ ಪತ್ರದಲ್ಲಿ ಪ್ರಸ್ತಾವನೆಯೊಂದಿಗೆ ಸಮಗ್ರ ಇಲಾಖಾ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

3) ಮೇಲ್ಕಂಡ ಎಲ್ಲಾ ಪ್ರಕರಣಗಳಲ್ಲೂ ಎಲ್ಲಾ ವಿಚಾರಣಾ ವರದಿಗಳ ಪ್ರತಿಗಳನ್ನು ಆರೋಪಿತರಿಗೆ ಜಾರಿ ಮಾಡಿ ವಿಚಾರಣಾಧಿಕಾರಿಯ ನಿರ್ಣಯದ ಬಗ್ಗೆ ಲಿಖಿತ ಹೇಳಿಕೆಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸುವಂತೆ ಸೂಚಿಸಲಾಗಿದ್ದರೂ ಸಹ ಆರೋಪಿತ ಅಧಿಕಾರಿಯು ಯಾವುದೇ ಲಿಖಿತ ಹೇಳಿಕೆಯನ್ನು ಶಿಸ್ತು ಪ್ರಾಧಿಕಾರಕ್ಕೆ ಸಲ್ಲಿಸಿರುವುದಿಲ್ಲ.

4) ಶ್ರೀ ಹೆಚ್.ಬಿ. ಕುಳ್ಳಾನಾಯಕ್ ರೇಷ್ಮೆ ಸಹಾಯಕ ನಿರ್ದೇಶಕರು, ಇವರು ಬಿ. ದರ್ಜೆ ಅಧಿಕಾರಿಯಾಗಿದ್ದು ಇವರಿಗೆ ದಂಡನೆ ವಿಧಿಸುವ ವಿಷಯದಲ್ಲಿ ಮೊದಲನೆಯ ಇಲಾಖಾ ವಿಚಾರಣಾ ವರದಿಯ ಆಧಾರದ ಮೇಲೆ ರೇಷ್ಮೆ ಆಯುಕ್ತರ ಶಿಫಾರಸ್ಸಿನಂತೆ KPSC (Consultation) Regulations 2000ರಡಿಯಲ್ಲಿ ಮೇಲೆ ಓದಲಾದ ಕ್ರಮಸಂಖ್ಯೆ (10)ರ ಪತ್ರದಲ್ಲಿ ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಯನ್ನು ಕೋರಲಾಗಿ, ಆಪಾದಿತರಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟವನ್ನು ಶೇ. 8 ರಂತೆ ಬಡ್ಡಿ ಸಮೇತ ವಸೂಲು ಮಾಡುವ ನಿಬಂಧನೆಗೊಳಪಟ್ಟು ಸೇವೆಯಿಂದ ವಜಾಗೊಳಿಸುವ ದಂಡನೆ ವಿಧಿಸುವ ಮತ್ತು ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಹಣ ರೂ. 3,41,088/–ಗಳನ್ನು ವಸೂಲಿ ಮಾಡಲು ನ್ಯಾಯಾಲಯದಲ್ಲಿ ದಾವೆ ಹೂಡುವ ಪ್ರಸ್ತಾವನೆಗೆ ಸದರಿ ಆಯೋಗವು ಪತ್ರ ಸಂಖ್ಯೆ:ಪಿಎಸ್‌ಸಿ 197 ಸಿಎನ್‌ಎಸ್ 06 ದಿನಾಂಕ: 29.6.2007 ರಲ್ಲಿ ಸಹಮತಿಯನ್ನು ನೀಡಿರುತ್ತದೆ. ಈ ಮೊದಲನೆಯ ಪ್ರಕರಣದಲ್ಲಿಯೇ ಕರ್ನಾಟಕ ಲೋಕಸೇವಾ ಆಯೋಗವು ಸಹಮತಿ ನೀಡಿರುವುದರಿಂದ ಇನ್ನುಳಿದ ಎರಡು ಪ್ರಕರಣಗಳಲ್ಲಿ ಮತ್ತೆ ಆಯೋಗದ ಸಹಮತಿ ಪಡೆಯುವ ಅವಶ್ಯಕತೆ ಇರುವುದಿಲ್ಲ.

5) ಹಿಂದಿನ ಕಂಡಿಕೆಗಳಲ್ಲಿ ವಿವರಿಸಿರುವನ್ವಯ, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಶಿಫಾರಸ್ಸಿನಂತೆ ಹಾಗೂ ಲೋಕಸೇವಾ ಆಯೋಗದ ಸಹಮತಿಯ ಹಿನ್ನೆಲೆಯಲ್ಲಿ ಆರೋಪಿತ ಅಧಿಕಾರಿಯಾದ ಶ್ರೀ ಹೆಚ್.ಬಿ. ಕುಳ್ಳಾನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಹಾಸನ (ಹಾಲಿ ಅಮಾನತ್ತಿನಲ್ಲಿರುವ) ಇವರನ್ನು ತಕ್ಷಣವೇ ಸೇವೆಯಿಂದ ವಜಾಗೊಳಿಸಲು ಮತ್ತು ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟದ ಮೊತ್ತ ಒಟ್ಟು ರೂ. 4,33,208/–ವನ್ನು ವಾರ್ಷಿಕ ಶೇ. 8ರ ಬಡ್ಡಿ ಸಮೇತ ಅವರಿಂದ ವಸೂಲಿ ಮಾಡುವ ಪ್ರಸ್ತಾವನೆಯನ್ನು ಸರ್ಕಾರವು ಕೂಲಂಕಷವಾಗಿ ಪರಿಶೀಲಿಸಿದೆ. ಪರಿಶೀಲನೆಯ ನಂತರ ಶ್ರೀ ಹೆಚ್.ಬಿ. ಕುಳ್ಳಾನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ 8(viii) ರಡಿ ಸೇವೆಯಿಂದ ಕೂಡಲೇ ವಜಾಗೊಳಿಸುವ ದಂಡನೆಯನ್ನು ವಿಧಿಸಲು ಹಾಗೂ ಈ ಎಲ್ಲಾ ಪ್ರಕರಣಗಳಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟದ ಮೊತ್ತ ಒಟ್ಟು ರೂ. 4,33,208/–ವನ್ನು ವಾರ್ಷಿಕ ಶೇ. 8ರ ಬಡ್ಡಿ ಸಮೇತ ವಸೂಲಿ ಮಾಡಲು ಸಕ್ಷಮ ನ್ಯಾಯಾಲಯದಲ್ಲಿ ದಾವೆ ಹೂಡಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ:

**ಸರ್ಕಾರದ ಆದೇಶ ಸಂಖ್ಯೆ:ವಾಕೈ 39 ರೇಸೇವಿ 2006 ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಹೆಚ್.ಬಿ. ಕುಳ್ಳಾನಾಯಕ್, ರೇಷ್ಮೆ ಸಹಾಯಕ ನಿರ್ದೇಶಕರು, ಸರ್ಕಾರಿ ಮಾದರಿ ಬಿತ್ತನೆ ಕೋಠಿ, ಹಾಸನ (ಹಾಲಿ ಅಮಾನತ್ತಿನಲ್ಲಿರುವ) ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ 8(viii)ರಡಿ ಸೇವೆಯಿಂದ ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರವು ವಜಾಗೊಳಿಸಿದೆ. ಅಂತೆಯೇ ಇವರಿಂದ ಸರ್ಕಾರಕ್ಕೆ ಉಂಟಾದ ಆರ್ಥಿಕ ನಷ್ಟದ ಮೊತ್ತ ಒಟ್ಟು ರೂ. 4,33,208/– (ರೂ ನಾಲ್ಕು ಲಕ್ಷದ ಮೂವತ್ಮೂರು ಸಾವಿರದ ಇನ್ನೂರಾ ಎಂಟು ಮಾತ್ರ) ವನ್ನು ವಾರ್ಷಿಕ ಶೇ. 8ರ ಬಡ್ಡಿ ಸಮೇತ ವಸೂಲಿ ಮಾಡಲು ಸಕ್ಷಮ ನ್ಯಾಯಾಲಯದಲ್ಲಿ ದಾವೆ ಹೂಡಲು ಸರ್ಕಾರವು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರಿಗೆ ಆದೇಶಿಸಿದೆ. ಸದರಿ ಅಧಿಕಾರಿಯವರು ವಸೂಲಾತಿಗೆ ಕೂಡಲೇ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2461

**ಬಿ. ದೇವಿಕ**

ಸರ್ಕಾರದ ಅಧೀನ ಕಾರ್ಯದರ್ಶಿ(ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ವಿಷಯ :** ಶ್ರೀ ಯು.ಹೆಚ್. ಹಿರೇಮಠ, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಜಂಟಿ ನಿರ್ದೇಶಕ ಕಛೇರಿ, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು) (ಹಿಂದಿನ ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಬಿತ್ತನೆ ಕೋಠಿ, ಹಿಂಡಲಗಾ, ಬೆಳಗಾಂ) ಇವರ ವಿರುದ್ದದ ಶಿಸ್ತು ಪ್ರಕರಣ –ಸೇವೆಯಿಂದ ವಜಾಗೊಳಿಸಿ ಸರ್ಕಾರಕ್ಕೆ ಉಂಟಾಗಿರುವ ನಷ್ಟ ರೂ. 1,01,09, 397/– ಗಳ ವಸೂಲಾತಿ ಬಗ್ಗೆ.

**ಓದಲಾಗಿದೆ :**

1. ದಿನಾಂಕ:17.1.2003ರ ಆದೇಶ ಸಂ:ವಾಕೈ 415 ರೇಸೇವಿ 2002.
2. ರೇಷ್ಮೆ ಇಲಾಖೆಯ ಆದೇಶ ಸಂ:ಸಿ3/ಶಿಸ್ತು ರೇವಿಅ/22/93–99 ದಿನಾಂಕ:17.9.2003.
3. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂ:ಸಿ3/ಶಿಸು/ರೇವಿಅ/22/1998–99 ದಿನಾಂಕ:12.12.2006 ಮತ್ತು 10.8.2007
4. ರೇಷ್ಮೆ ಇಲಾಖೆಯ ಆದೇಶ ಸಂ:ಸಿ3/ಶಿಸ್ತು/ರೇವಿಅ/04/02–03 ದಿನಾಂಕ:21.10.2003.

5. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಪತ್ರ ಸಂಖ್ಯೆ:ಸಿ3/ ಶಿಸ್ತು/.ರೇವಿಅ/ 04/2002–03 ದಿನಾಂಕ :10.8.2004, 30.9.2004 ಮತ್ತು 6.2.2006.

6. ಕರ್ನಾಟಕ ಲೋಕಸೇವಾ ಆಯೋಗದ ಪತ್ರ ಸಂ:ಪಿಎಸ್‌ಸಿ199 ಸಿಎನ್‌ಎಸ್08 ದಿನಾಂಕ:17.6.09

**ಪ್ರಸ್ತಾವನೆ:**

ಶ್ರೀ ಯು.ಹೆಚ್. ಹಿರೇಮಠ, ರೇಷ್ಮೆ ವಿಸ್ತರಣಾಧಿಕಾರಿ. ಇವರು ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ ಹಿಂಡಲಗಾ, ಇಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಎಸಗಿರುವ ಅಧಿಕಾರ/ಆರ್ಥಿಕ ದುರುಪಯೋಗಕ್ಕೆ ಸಂಬಂಧಿಸಿದಂತೆ ಶಿಸ್ತು ಕ್ರಮ ಜರುಗಿಸಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರನ್ನು ಶಿಸ್ತು ಪ್ರಾಧಿಕಾರಿಯಾಗಿ ಮೇಲೆ ಓದಲಾದ (1)ರ ಆದೇಶದಲ್ಲಿ ಸರ್ಕಾರವು ನೇಮಿಸಿದೆ.

2) ಶ್ರೀ ಯು.ಹೆಚ್.ಹಿರೇಮಠ, ರೇಷ್ಮೆ ವಿಸ್ತರಣಾಧಿಕಾರಿ, ಇವರು ಸರ್ಕಾರಿ ರೇಷ್ಮೆ ಬಿತ್ತನೆ ಕೋಠಿ, ಹಿಂಡಲಗಾ, ಬೆಳಗಾಂ, ಇಲ್ಲಿ ದಿನಾಂಕ:1.4.1995 ರಿಂದ 14.10.1999 ರ ಅವಧಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಬೃಹತ್ ಮೊತ್ತದ ಹಣ ಹಾಗೂ ಅಧಿಕಾರ ದುರುಪಯೋಗಪಡಿಸಿಕೊಂಡು ಸರ್ಕಾರಕ್ಕೆ ನಷ್ಟ ಉಂಟು ಮಾಡಿರುತ್ತಾರೆಂದು ರೇಷ್ಮೆ ನಿರ್ದೇಶನಾಲಯದಿಂದ ನಡೆಸಿರುವ ಲೆಕ್ಕ ಪರಿಶೋಧನೆ ವರದಿಯಿಂದ ಬೆಳಕಿಗೆ ಬಂದ ಕಾರಣ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಸಿ.ಸಿ.ಎ. ನಿಯಮ 11 ರಡಿಯಲ್ಲಿ ತಿಳುವಳಿಕೆ ಪತ್ರದೊಂದಿಗೆ ಆರೋಪ ಪಟ್ಟಿಯನ್ನು ಜಾರಿಗೊಳಿಸಲಾಗಿದ್ದು, ಈ ಅಧಿಕಾರಿಯು ಆರೋಪ ಪಟ್ಟಿಯನ್ನು ಸ್ವೀಕರಿಸಿದ್ದು, ಆದರೆ ನಿಗದಿತ ಅವಧಿಯಲ್ಲಿ ಯಾವುದೇ ಲಿಖಿತ ಹೇಳಿಕೆ ಸಲ್ಲಿಸಿರುವುದಿಲ್ಲ ಹಾಗೂ ವಿಳಂಬವಾಗಿ ಲಿಖಿತ ಹೇಳಿಕೆ ನೀಡಿ ಆರೋಪವನ್ನು ನಿರಾಕರಿಸಿರುತ್ತಾರೆ. ಮಿಶ್ರತಳಿ ಹಾಗೂ ದ್ವಿತಳಿ ಮೊಟ್ಟೆಗಳನ್ನು ತಯಾರಿಸಿ ಅವುಗಳನ್ನು ಮಾರಾಟ ಮಾಡಿದ್ದು ಅವುಗಳ ಮೌಲ್ಯ ದುರುಪಯೋಗಪಡಿಸಿಕೊಂಡಿರುವುದು. ಅಧಿಕಾರಿಯ ಕರ್ತವ್ಯಲೋಪ ಬೇಜವಾಬ್ದಾರಿ, ಮೇಲಾಧಿಕಾರಿಗಳ ಆದೇಶ ಉಲ್ಲಂಘನೆ, ವಿಳಂಬ ನೀತಿಯ ಆರೋಪಗಳಿಂದ ಸರ್ಕಾರಕ್ಕೆ ನಷ್ಟ ಉಂಟಾಗಲು ಕಾರಣಕರ್ತರಾಗಿರುತ್ತಾರೆ. ಆರೋಪದ ಸತ್ಯಾಸತ್ಯತೆಯನ್ನು ಕಂಡುಹಿಡಿಯಲು ವಿಚಾರಣೆಯನ್ನು ನಡೆಸಲು ಆದೇಶಿಸಿ, ನಿವೃತ್ತ ನ್ಯಾಯಾಧೀಶರಿಗೆ ಇಲಾಖಾ ವಿಚಾರಣೆ ನಡೆಸಲು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಮೇಲೆ ಓದಲಾದ (2)ರ ಆದೇಶದಲ್ಲಿ ಆದೇಶಿಸಿದ್ದು, ವಿಚಾರಣಾಧಿಕಾರಿಗಳು ವಿಚಾರಣಾ ವರದಿಯನ್ನು ಸಲ್ಲಿಸಿರುತ್ತಾರೆ. ಸದರಿ ವರದಿಯನ್ನು ಶ್ರೀ ಯು.ಹೆಚ್. ಹಿರೇಮಠರವರಿಗೆ ಜಾರಿಮಾಡಿ ಹೇಳಿಕೆ ಇದ್ದಲ್ಲಿ ಲಿಖಿತವಾಗಿ ನೀಡುವಂತೆ ಸೂಚಿಸಿದ್ದು ಸದರಿ ಅಧಿಕಾರಿಯು ಲಿಖಿತ ಹೇಳಿಕೆ ನೀಡಲು ಹೆಚ್ಚಿನ ಕಾಲಾವಕಾಶ ಕೋರಿ ಮನವಿ ಸಲ್ಲಿಸಿದ್ದು ಅವರ ಮನವಿಯನ್ನು ಪರಿಗಣಿಸಿ ಹೆಚ್ಚಿನ ಕಾಲಾವಕಾಶ ನೀಡಿದರೂ ಸಹ ಶ್ರೀ ಯು.ಹೆಚ್. ಹಿರೇಮಠರವರು ಯಾವುದೇ ಲಿಖಿತ ಹೇಳಿಕೆ ನೀಡಿರುವುದಿಲ್ಲ. ಇವರ ವಿರುದ್ಧದ ಇಲಾಖಾ ವಿಚಾರಣೆಯಲ್ಲಿನ ಎಲ್ಲಾ ಹಂತವನ್ನು ನಿಯಮಾನುಸಾರ ಪರಿಶೀಲಿಸಲಾಗಿದ್ದು, ಈ ಅಧಿಕಾರಿಯು ನ್ಯಾಯಬದ್ಧವಾಗಿ ವಿಚಾರಣೆಗೆ ಹಾಜರಾಗಿಲ್ಲವೆಂದು, ವಿಚಾರಣೆಗೆ ಹಾಜರಾಗಲು ಕಳುಹಿಸಿರುವ ಪತ್ರಗಳಿಗೆ ಸರಿಯಾಗಿ ಸ್ಪಂದಿಸದೆ ವಿಚಾರಣೆಗೆ ಸಹಕರಿಸದೆ ಇರುವುದು ದಾಖಲೆಗಳಿಂದ ದೃಢಪಡುತ್ತದೆ. ಈ ಅಧಿಕಾರಿಯ ಮೇಲಿನ 32 ಆರೋಪಗಳ ಪೈಕಿ 22 ಆರೋಪಗಳು ಸಾಬೀತಾಗಿ, ಈ ಸಾಬೀತಾದ ಆರೋಪಗಳಿಂದ ಒಟ್ಟು ರೂ. 98,28,733.35ಗಳ ಮೊತ್ತಕ್ಕೆ ಆರೋಪಿತ ಅಧಿಕಾರಿಯು ಕಾರಣಕರ್ತನಾಗಿದ್ದು, ಇವರಿಂದ ಈ ಹಣವನ್ನ ವಸೂಲು ಮಾಡಿ ಸರ್ಕಾರಕ್ಕೆ ಜಮೆ ಮಾಡಲು ಮತ್ತು ಕಠಿಣ ದಂಡನೆಯನ್ನು ವಿಧಿಸುವಂತೆ ಮೇಲೆ ಓದಲಾದ (3)ರ ಪತ್ರದಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

3) ಶ್ರೀ ಯು.ಹೆಚ್. ಹಿರೇಮಠ ರೇಷ್ಮೆ ವಿಸ್ತರಣಾಧಿಕಾರಿ, ಇವರ ಮೇಲೆ ಮತ್ತೊಂದು ಆರ್ಥಿಕ ಹಾಗೂ ಅಧಿಕಾರ ದುರುಪಯೋಗದ ಪ್ರಕರಣವು ಇದ್ದು, ಈ ಪ್ರಕರಣದಲ್ಲಿಯೂ ರೇಷ್ಮೆ ಕೃಷಿ ಕ್ಷೇತ್ರ ಹಿಂಡಲಗಾ, ಬೆಳಗಾಂ, ಇಲ್ಲಿ ರೇಷ್ಮೆ ವಿಸ್ತರಣಾಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಮಿಶ್ರತಳಿ ಮತ್ತು ವಿದೇಶಿ ತಳಿ ಮೊಟ್ಟೆಗಳ ಬಾಬ್ತು ಸರ್ಕಾರಕ್ಕೆ ಇರಸಾಲು ಮಾಡದೆ ದುರುಪಯೋಗಪಡಿಸಿಕೊಂಡಿರುವ ಬಗ್ಗೆ ಸಂಸ್ಥೆಗೆ ಸಂಬಂಧಪಟ್ಟ ದಾಖಲೆಗಳನ್ನು ಹಸ್ತಾಂತರಿಸಿಲ್ಲದಿರುವ ಬಗ್ಗೆ ದೂರವಾಣಿಯ ದುರ್ಬಳಕೆ ಮುಂತಾದ ಆರೋಪಗಳ ಬಗ್ಗೆ ನಿವೃತ್ತ ನ್ಯಾಯಾಧೀಶರಿಂದ ಇಲಾಖಾ ವಿಚಾರಣೆ ನಡೆಸಲು ಮೇಲೆ ಓದಲಾದ (4)ರ ಆದೇಶದಲ್ಲಿ ರೇಷ್ಮೆ ಆಯುಕ್ತರು ಆದೇಶಿಸಿದ್ದಾರೆ. ಇಲಾಖಾ ವಿಚಾರಣೆ ನಡೆಸಲ್ಪಟ್ಟಿದ್ದು ವಿಚಾರಣಾ ವರದಿಯ ಪ್ರಕಾರ 9 ಆರೋಪಗಳ ಪೈಕಿ 8 ಆರೋಪಗಳು ಸಾಬೀತಾಗಿದ್ದು ರೂ. 2,80,664/–ಗಳ ಮೊತ್ತಕ್ಕೆ ಆರೋಪಿತ ಅಧಿಕಾರಿಯು ಕಾರಣಕರ್ತರಾಗಿರುತ್ತಾರೆ. ವಿಚಾರಣಾ ವರದಿಯನ್ನು ಸದರಿ ಅಧಿಕಾರಿಗೆ ಜಾರಿ ಮಾಡಲಾಗಿದ್ದು ತಮ್ಮ ಲಿಖಿತ ಹೇಳಿಕೆಯಲ್ಲಿ ವಿಚಾರಣಾಧಿಕಾರಿಗಳು ತಮ್ಮ ಅನುಪಸ್ಥಿತಿಯಲ್ಲಿ ವಿಚಾರಣೆ ನಡೆಸಿದ್ದಾರೆಂದು ತಿಳಿಸಿ, ವಿಚಾರಣೆಗೆ ಸಕಾಲಕ್ಕೆ ಹಾಜರಾಗಲು ಸಾಧ್ಯವಾಗದೇ ಇರುವುದೆಂಬ ಕಾರಣಗಳನ್ನು ನೀಡಿ ವಿಚಾರಣೆ ಮುಂದೂಡುವಂತೆ ಕೋರಿದ್ದರೂ ವಿಚಾರಣಾಧಿಕಾರಿಗಳು ಏಕಪಕ್ಷೀಯವಾಗಿ ತೀರ್ಮಾನ ತೆಗೆದುಕೊಂಡಿರುತ್ತಾರೆಂದು ಇದರಿಂದ ತಮ್ಮ ಮೇಲೆ ಮಾಡಲಾದ ಆರೋಪಗಳನ್ನು ಅಲ್ಲಗೆಳೆಯಲು ಸಾಧ್ಯವಾಗದೆ ಹೋಯಿತೆಂದು ತಿಳಿಸಿ ಮರು ವಿಚಾರಣೆಗೆ ಅವಕಾಶ ನೀಡಬೇಕೆಂದು ಕೋರಿರುತ್ತಾರೆ., ಆದರೆ ವಿಚಾರಣಾ ವರದಿಯನ್ನು ಪರಿಶೀಲಿಸಿದಾಗ ವಿಚಾರಣಾಧಿಕಾರಿಗಳು ವಿಚಾರಣೆಗೆ ಹಾಜರಾಗಲು ಪತ್ರ ವ್ಯವಹಾರ ನಡೆಸಿದ್ದು, ಆಪಾದಿತ ಅಧಿಕಾರಿ ವಿಚಾರಣೆಗೆ ಗೈರುಹಾಜರಾಗಿರುವುದು ಮತ್ತು ವಿಚಾರಣಾಧಿಕಾರಿಗಳು ನೀಡಿರುವ ನೋಟೀಸ್‌ಗಳನ್ನು ಪುರಸ್ಕರಿಸಿರುವುದು ಕಂಡುಬರುತ್ತದೆ. ಈ ಕಾರಣಗಳಿಂದಾಗಿ ಇವರ ಮೇಲಿನ ಆರೋಪಗಳು

ಸಾಬೀತಾಗಿರುವುದರಿಂದ ಹಾಗೂ ಗಂಭೀರ ಸ್ವರೂಪದ್ದಾಗಿರುವುದರಿಂದ ಇವರಿಂದ ಈ ಹಣವನ್ನು ವಸೂಲು ಮಾಡುವುದು ಹಾಗೂ ಕಠಿಣ ದಂಡನೆಯನ್ನು ವಿಧಿಸುವುದು ಸೂಕ್ತವೆಂದು ಇಲಾಖಾ ಮುಖ್ಯಸ್ಥರಾದ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ.

4) ಆದುದರಿಂದ ಶ್ರೀ ಯು.ಹೆಚ್. ಹಿರೇಮಠ, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ ಇವರ ಮೇಲಿನ ಗಂಭೀರ ಸ್ವರೂಪದ ಆರೋಪಗಳು ವಿಚಾರಣೆಯಿಂದ ದೃಢಪಟ್ಟಿರುವುದರಿಂದ ಹಾಗೂ ಭಾರೀ ಪ್ರಮಾಣದ ಸರ್ಕಾರಿ ಹಣ ದುರುಪಯೋಗ ಅಂದರೆ ರೂ. 1,01,09,397/– (ರೂ. ಒಂದು ಕೋಟಿ ಒಂದು ಲಕ್ಷ ಒಂಬತ್ತು ಸಾವಿರದ ಮುನ್ನೂರಾ ತೊಂಬತ್ತೇಳು) ರೂಪಾಯಿಗಳು ಆರ್ಥಿಕ ನಷ್ಟ ಸರ್ಕಾರಕ್ಕೆ ಉಂಟಾಗಿರುವುದರಿಂದ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮ, 1957ರ ನಿಯಮ 8(viii)ರಡಿ ಪ್ರದತ್ತವಾದ ಅಧಿಕಾರದನ್ವಯ ಕೆಳಕಂಡ ದಂಡನೆಯನ್ನು ವಿಧಿಸುವ ಬಗ್ಗೆ ಪರಿಶೀಲಿಸಲಾಗಿದೆ.

ಎ) ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ ನಿಯಮ, 1957, ನಿಯಮ 8(viii) ರನ್ವಯ ಸೇವೆಯಿಂದ ವಜಾಗೊಳಿಸುವುದು.

ಬಿ) ಸರ್ಕಾರಕ್ಕೆ ಉಂಟಾಗಿರುವ ನಷ್ಟ ರೂ. 1,01,09,397/–ಅನನು ದಾವೆ ಹೂಡುವ ಮೂಲಕ ವಸೂಲಾತಿ ಮಾಡಲು ಕ್ರಮ ಕೈಗೊಳ್ಳವುದು.

5) ಕರ್ನಾಟಕ ಲೋಕಸೇವಾ ಆಯೋಗ (Consultation) Regulation 2000 ದ ಐಟಮ್ 5ರನ್ವಯ ಮೇಲ್ಕಂಡ ಪ್ರಸ್ತಾವನೆಗೆ ಕರ್ನಾಟಕ ಲೋಕಸೇವಾ ಆಯೋಗವು ಪತ್ರ ಸಂಖ್ಯೆ:ಪಿಎಸ್ಎಲ್ 199 ಸಿಎನ್ 508 ದಿನಾಂಕ:17.6.2009ರಲ್ಲಿ ಸಹಮತಿಯನ್ನು ನೀಡಿರುತ್ತದೆ.

6) ಹಿಂದಿನ ಕಂಡಿಕೆಗಳಲ್ಲಿ ವಿವರಿಸಿರುವವನ್ವಯ, ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರ ಶಿಫಾರಸ್ಸಿನಂತೆ ಆರೋಪಿತ ಅಧಿಕಾರಿಯಾದ ಶ್ರೀ ಯು.ಹೆಚ್. ಹಿರೇಮಠ, ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಇಲಾಖೆ, ಬೆಂಗಳೂರು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು, 1957ರ ನಿಯಮ 8(viii)ರಡಿ ಸೇವೆಯಿಂದ ತಕ್ಷಣದಿಂದಲೇ ಜಾರಿಗೆ ಬರುವಂತೆ ವಜಾಗೊಳಿಸುವ ದಂಡನೆಯನ್ನು ವಿಧಿಸಲು ಹಾಗೂ ಈ ಅಧಿಕಾರಿಯಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತವಾದ ರೂ. 1,0,1,09,397/–ಗಳನ್ನು ಸಕ್ಷಮ ನ್ಯಾಯಾಯಲದಲ್ಲಿ ದಾವೆ ಹೂಡುವ ಮೂಲಕ ವಸೂಲಾತಿ ಮಾಡುವುದಕ್ಕೆ ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ:ವಾಕೈ 25 ರೇಸೇವಿ 2007, ಬೆಂಗಳೂರು, ದಿನಾಂಕ: 27ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಶ್ರೀ ಯು.ಹೆಚ್. ಹಿರೇಮಠ ರೇಷ್ಮೆ ವಿಸ್ತರಣಾಧಿಕಾರಿ, ರೇಷ್ಮೆ ಜಂಟಿ ನಿರ್ದೇಶಕರ ಕಛೇರಿ, ರೇಷ್ಮೆ ವಿನಿಮಯ ಕೇಂದ್ರ, ಬೆಂಗಳೂರು ಇವರನ್ನು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಹಾಗೂ ಮೇಲ್ಮನವಿ) ನಿಯಮಗಳು 1957ರ ನಿಯಮ 8(viii)ರಡಿ ಸರ್ಕಾರಿ ಸೇವೆಯಿಂದ ತಕ್ಷಣದಿಂದಲೇ ಜಾರಿಗೆ ಬರುವಂತೆ ಸರ್ಕಾರವು ವಜಾಗಳಿಸಿದೆ. ಅಂತೆಯೇ ಈ ಅಧಿಕಾರಿಯಿಂದ ಸರ್ಕಾರಕ್ಕೆ ಉಂಟಾಗಿರುವ ನಷ್ಟದ ಮೊತ್ತವಾದ ರೂ, 1,01,09,397/– (ಒಂದು ಕೋಟಿ ಒಂದು ಲಕ್ಷ ಒಂಬತ್ತು ಸಾವಿರದ ಮುನ್ನೂರಾ ತೊಂಬತ್ತೇಳು) ಗಳನ್ನು ಸಕ್ಷಮ ನ್ಯಾಯಾಲಯದಲ್ಲಿ ದಾವೆ ಹೂಡುವ ಮೂಲಕ ವಸೂಲಾತಿ ಮಾಡಲು ಸರ್ಕಾರವು ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು, ಬೆಂಗಳೂರು ಇವರಿಗೆ ಆದೇಶಿಸಿದೆ. ಸದರಿ ಅಧಿಕಾರಿಯವರು ಕೂಡಲೇ ವಸೂಲಾತಿಗೆ ಕ್ರಮ ಜರುಗಿಸುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2462

**ಬಿ. ದೇವಿಕ**

ಸರ್ಕಾರದ ಅಧೀನ ಕಾರ್ಯದರ್ಶಿ(ರೇಷ್ಮೆ),

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

## ಕಾರ್ಮಿಕ ಸಚಿವಾಲಯ

**ವಿಷಯ :** ಯೋಜನಾ ಕಾರ್ಯಕ್ರಮದಡಿಯಲ್ಲಿ ಮಂಜೂರಾಗಿರುವ ಹುದ್ದೆಗಳನ್ನು ಯೋಜನೇತರ ಹುದ್ದೆಗಳನ್ನಾಗಿ ಪರಿವರ್ತಿಸುವ ಬಗ್ಗೆ.

**ಓದಲಾಗಿದೆ :** ಉದ್ಯೋಗ ಮತ್ತು ತರಬೇತಿ ಇಲಾಖೆರವರ ಪತ್ರ ಸಂಖ್ಯೆ:ಉತನಿ/ಉದ್ಯೋಗ/ಆಡಳಿತ–1/ವಿವ–44/2 2008–09 ದಿನಾಂಕ:16.1.2009 ಮತ್ತು 1.7.2009.

**ಪ್ರಸ್ತಾವನೆ:**

ಮೇಲೆ ಓದಲಾದ ಆಯುಕ್ತರು, ಉದ್ಯೋಗ ಮತ್ತು ತರಬೇತಿ ಇಲಾಖೆ ಇವರ ಪತ್ರಗಳಲ್ಲಿ ಉದ್ಯೋಗ ಮತ್ತು ತರಬೇತಿ ಇಲಾಖೆಯ ಉದ್ಯೋಗ ವಿಭಾಗದಲ್ಲಿ 2009–10ನೇ ಸಾಲಿನ ಯೋಜನೆ ಅಡಿಯಲ್ಲಿ ಮುಂದುವರೆಸಲಾದ ಈ ಕೆಳಕಂಡ ಹುದ್ದೆಗಳನ್ನು ಯೋಜನೇತರ ಹುದ್ದೆಗಳೆಂದು ಪರಿವರ್ತಿಸಲು ಕೋರಿರುತ್ತಾರೆ.

| ಕ್ರ. ಸಂ | ಉದ್ಯೋಗ ವಿನಿಮಯ ಕೇಂದ್ರ | ಸಹಾಯಕ ಉದ್ಯೋಗಾಧಿಕಾರಿ | ದ್ವಿತೀಯ ದರ್ಜೆ ಸಹಾಯಕ | ವಾಹನ ಚಾಲಕ | ಒಟ್ಟು |
|---|---|---|---|---|---|
| 1 | ಸಂಚಾರಿ ನೋಂದಣಿ ಘಟಕ ಬೀದರ್, (ಜಿಲ್ಲಾ ಉದ್ಯೋಗ ವಿನಿಯ ಕೇಂದ್ರ ಬೀದರ್) | 1 | 1 | – | 2 |
| 2 | ಸಂಚಾರಿ ನೋಂದಣಿ ಘಟಕ ಬಿಜಾಪುರ, (ಜಿಲ್ಲಾ ಉದ್ಯೋಗ ವಿನಿಯ ಕೇಂದ್ರ ಬಿಜಾಪುರ) | 1 | 1 | – | 2 |
| 3 | ಸಂಚಾರಿ ನೋಂದಣಿ ಘಟಕ ಗುಲ್ಬರ್ಗಾ, (ಜಿಲ್ಲಾ ಉದ್ಯೋಗ ವಿನಿಯ ಕೇಂದ್ರ ಗುಲ್ಬರ್ಗಾ) | 1 | 1 | – | 2 |
| 4 | ನಿರ್ದೇಶನಾಲಯ ಬೆಂಗಳೂರು | – | – | 1 | 1 |
| | **ಒಟ್ಟು** | **3** | **3** | **1** | **7** |

ಪ್ರಸ್ತಾವನೆಯನ್ನು ಪರಿಶೀಲಿಸಿದ ನಂತರ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ ಕಾಇ 5 ಇಟಿಎಕ್ಸ್ 2009, ಬೆಂಗಳೂರು, ದಿನಾಂಕ:22ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ತಿಳಿಸಿರುವ 1983 ರಿಂದ 2000 ಸಾಲಿನ ಅವಧಿಯಲ್ಲಿನ ಯೋಜನೆಯಡಿಯ ಹುದ್ದೆಗಳನ್ನು 2010–11ನೇ ಸಾಲಿಗೆ ಯೋಜನೇತರಡಿ ಒಳಪಡಿಸುವುದಕ್ಕೆ ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 494 ವೆಚ್ಚ–9/2009 ದಿನಾಂಕ:3.10.2009ರ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2463

**ಎ.ಎಸ್. ವಿಶ್ವೇಶ್ವರಯ್ಯ**
ಪೀಠಾಧಿಕಾರಿ,
ಕಾರ್ಮಿಕ ಇಲಾಖೆ. (ಉದ್ಯೋಗ ಮತ್ತು ತರಬೇತಿ)

**ಇಂಧನ ಸಚಿವಾಲಯ**

**ವಿಷಯ :** ಮೆ:ಎಸ್ ಆರ್ ಎಂ ಪವರ್ ಪ್ರೈವೇಟ್ ಲಿಮಿಟೆಡ್ ಇವರಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸೋಮಾವತಿ ಹೊಳೆಗೆ ಅಡ್ಡಲಾಗಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಧಿಯನ್ನು ವಿಸ್ತರಿಸುವ ಬಗ್ಗೆ.

**ಓದಲಾಗಿದೆ :**
1. ಸರ್ಕಾರಿ ಆದೇಶ ಸಂಖ್ಯೆ :ಇಂಇ 52 ಎನ್‌ಸಿಇ 2004 ದಿನಾಂಕ:13.2.2004.
2. ಸರ್ಕಾರಿ ಆದೇಶ ಸಂಖ್ಯೆ :ಇಂಇ 52 ಎನ್‌ಸಿಇ 2004 ದಿನಾಂಕ: 4.11.2004.
3. ಸರ್ಕಾರಿ ಆದೇಶ ಸಂಖ್ಯೆ :ಇಎನ್ 128 ಎನ್‌ಸಿಇ 2008 ದಿನಾಂಕ:3.5.2008.
4. ಸರ್ಕಾರಿ ಆದೇಶ ಸಂಖ್ಯೆ :ಇಎನ್ 193 ಎನ್‌ಸಿಇ 2009 ದಿನಾಂಕ: 25.4.2009.
5. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ : ಕೆಆರ್‌ಇಡಿಎಲ್/06/ಸೋಮಾವತಿ/2009/2373 ದಿನಾಂಕ :29.7.2009.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಆದೇಶದಲ್ಲಿ ಮೆ:ಎಸ್‌ಆರ್‌ಎಂ ಪವರ್ ಪ್ರೈವೇಟ್ ಲಿಮಿಟೆಡ್ ಕಂಪನಿಯವರಿಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸೋಮಾವತಿ ಹೊಳೆಗೆ ಅಡ್ಡಲಾಗಿ 2.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (2)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯ ಸಾಮರ್ಥ್ಯವನ್ನು 2.00 ಮೆಗಾ ವ್ಯಾಟ್‌ನಿಂದ 6.00 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಯೋಜನೆಯ ಅನುಷ್ಠಾನ ಮಾಡಲು ಅನುಮತಿ ನೀಡಲಾಗಿದೆ.

ಮೇಲೆ ಕ್ರಮ ಸಂಖ್ಯೆ (3)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಧಿಯನ್ನು ಸದರಿ ಆದೇಶ ಹೊರಡಿಸಿದ ದಿನಾಂಕದಿಂದ 31.12.2008 ರವರೆಗೆ ವಿಸ್ತರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಓದಲಾದ ಆದೇಶದಲ್ಲಿ ಸದರಿ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಧಿಯನ್ನು ದಿನಾಂಕ:30.6.2009ರ ವರೆಗೆ ವಿಸ್ತರಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (5)ರಲ್ಲಿ ಓದಲಾದ ಪತ್ರದಲ್ಲಿ ಮೆ:ಎಸ್‌ಆರ್‌ಎಂ ಪವರ್ ಪ್ರೈವೇಟ್ ಲಿಮಿಟೆಡ್‌ಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸೋಮಾವತಿ ನದಿಗೆ ಅಡ್ಡಲಾಗಿ ಹಂಚಿಕೆಯಾಗಿದ್ದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಕಾಲಾವಧಿಯನ್ನು ಒಂದು ವರ್ಷದವರೆಗೆ ವಿಸ್ತರಿಸಲು ಪರಿಗಣಿಬಹುದಾಗಿದೆಯೆಂದು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರು ಸರ್ಕಾರಕ್ಕೆ ಶಿಫಾರಸ್ಸು ಮಾಡಿ, ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ ಹಾಗೂ ಈ ಸಂಬಂಧ ಶುಲ್ಕ ರೂ. 6.00 ಲಕ್ಷಗಳನ್ನು ಪಾವತಿಸಿರುತ್ತಾರೆಂದು ವರದಿ ಮಾಡಿದ್ದಾರೆ.

ಸದರಿ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಇಎನ್ 440 ಎನ್‌ಸಿಇ 2009, ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್, 2009**

ಮೆ:ಎಸ್‌ಆರ್‌ಎಂ ಪವರ್ ಪ್ರೈವೇಟ್ ಲಿಮಿಟೆಡ್‌ಗೆ ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲ್ಲೂಕಿನ ಸೋಮಾವತಿ ಹೊಳಗೆ ಅಡ್ಡಲಾಗಿ ಹಂಚಿಕೆಯಾಗಿರುವ 6.00 ಮೆಗಾ ವ್ಯಾಟ್ ಸಾಮರ್ಥ್ಯದ ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನ ಮಾಡಲು ಕಾಲಾವಧಿಯನ್ನು ದಿನಾಂಕ:1.7.2009ರಿಂದ ಒಂದು ವರ್ಷದವರೆಗೆ ವಿಸ್ತರಿಸಲಾಗಿದೆ.

ಸದರಿ ಆದೇಶವನ್ನು ರದ್ದು ಪಡಿಸುವುದು/ಮಾರ್ಪಾಡು ಮಾಡುವ ಅಧಿಕಾರವನ್ನು ಸರ್ಕಾರವು ಹೊಂದಿರುತ್ತದೆ.

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಹಂಚಿಕೆ ಆದೇಶದ ಇತರೆ ನಿಬಂಧನೆಗಳು ಯಥಾವತ್ತಾಗಿ ಮುಂದುವರಿಯುತ್ತವೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2266

**ಎಸ್.ಜೆ. ಸಂಪತ್ ಕುಮಾರ್**

ಸರ್ಕಾರದ ಅಧೀನ ಕಾರ್ಯದರ್ಶಿ

ಇಂಧನ ಇಲಾಖೆ.

**ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಸಚಿವಾಲಯ**

**ವಿಷಯ :** ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಕಾರ್ಯದರ್ಶಿಯವರ ಕಛೇರಿಗೆ ಎರಡು 'ಡಿ' ದರ್ಜೆಯ ನೌಕರರನ್ನು ಗುತ್ತಿಗೆ ಆಧಾರದ ಮೇಲೆ ನೇಮಿಸಲು ಅನುಮತಿ ನೀಡುವ ಬಗ್ಗೆ.

**ಓದಲಾಗಿದೆ :** ಕಾರ್ಯದರ್ಶಿ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅವರ ಟಿಪ್ಪಣಿ ಸಂಖ್ಯೆ:ಕಅಪ್ರಾ/ಕಾ/34/08–09 ದಿನಾಂಕ:28.7.2009

**ಪ್ರಸ್ತಾವನೆ :**

ಮೇಲೆ ಓದಲಾದ ದಿನಾಂಕ:25.5.2009ರ ಪತ್ರದಲ್ಲಿ, ಅಧ್ಯಕ್ಷರು, ಕನ್ನಡ ಅಭಿವೃದ್ಧಿ ಪ್ರಾಧಿಕಾರ ಇವರು ಕಾರ್ಯದರ್ಶಿವರ ಕಛೇರಿಗೆ ಎರಡು 'ಡಿ' ದರ್ಜೆ ನೌಕರರ ಹುದ್ದೆಯು ಮಂಜೂರಾಗಿದ್ದು, ಪ್ರಸ್ತುತ ಈ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಒಬ್ಬ ನೌಕರರು ದೀರ್ಘಕಾಲದಿಂದ ಅನಧಿಕೃತ ಗೈರುಹಾಜರಾಗುತ್ತಿದ್ದು, ಕಛೇರಿ ಕೆಲಸಕ್ಕೆ ತುಂಬಾ ತೊಂದರೆಯಾಗಿರುತ್ತದೆ. ಅಲ್ಲದೇ ಸಚಿವಾಲಯದಲ್ಲಿ 'ಡಿ' ದರ್ಜೆಯ ನೌಕರರ ಕೊರತೆ ಇರುವುದರಿಂದ ಹಾಗೂ ಅನ್ಯ ಇಲಾಖೆಯಿಂದ ನಿಯೋಜನೆ ಮೇಲೆ ಈ ಹುದ್ದೆಗೆ ಯಾರೂ ಬರಲು ಆಸಕ್ತಿ ತೋರುತ್ತಿಲ್ಲವಾದ್ದರಿಂದ ಈ ಹುದ್ದೆಯು ಖಾಲಿ ಇರುತ್ತದೆ. ಆದ್ದರಿಂದ ಕಛೇರಿಗೆ 'ಡಿ' ದರ್ಜೆಯ ನೌಕರರನ್ನು ಹೊರಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಅನುಮತಿ ನೀಡಬೇಕೆಂದು ಕೋರಿರುತ್ತಾರೆ.

ಇದನ್ನು ಪರಿಶೀಲಿಸಿದ ಸರ್ಕಾರವು ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಕಸಂವಾಪ್ರ 55 ಕೆಓಎಲ್ 2009, ಬೆಂಗಳೂರು, ದಿನಾಂಕ:27ನೇ ಅಕ್ಟೋಬರ್, 2009**

ಪ್ರಸ್ತಾವನೆಯಲ್ಲಿ ವಿವರಿಸಿದ ಹಿನ್ನೆಲೆಯಲ್ಲಿ ಕನ್ನಡ ಅಭಿವೃದ್ಧಿ ಪ್ರಾಧಿಕಾರಕ್ಕೆ ಮಂಜೂರಾಗಿರುವ ಹುದ್ದೆಗಳಲ್ಲಿ ಒಂದು 'ಡಿ' ದರ್ಜೆಯ ಹುದ್ದೆಯು ಖಾಲಿ ಇರುವುದಾಗಿ ತಿಳಿಸಿರುವುದರಿಂದ ಆ ಒಂದು ಹುದ್ದೆಯನ್ನು ಮಾತ್ರ ಗುತ್ತಿಗೆ ಆಧಾರದ ಮೇಲೆ ನಿಯಮಾನುಸಾರ ನೇಮಿಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 913 ವೆಚ್ಚ–7/2009 ದಿನಾಂಕ:13.10.2009ರಲ್ಲಿ ನೀಡಿದ ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

ಪಿ.ಆರ್. 2466

**ಎಂ.ಕೆ. ಧರ್ಮರಾಜಪ್ಪ**

ಸರ್ಕಾರದ ಅಧೀನ ಕಾರ್ಯದರ್ಶಿ

ಕನ್ನಡ ಮತ್ತು ಸಂಸ್ಕೃತಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆ. (ಆಡಳಿತ ಕನ್ನಡ)